



# ಹೊಂಗನಸು



ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 52

| ಸಂಪುಟ: ೦೬ ಸಂಚಿಕೆ: ೨ | ಮೇ ೨೦೧೯ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
|---|---|---|---|---|
| Vol. 06 Issue 2 | May 2019 | Pages - 8 | A. Sub. - Rs. 20/- | Editor : Sri. B.R. Ravindranath |




೧೧ –೦೪–೨೦೧೯

## ಪ್ರೊ. ಸೂ.ವೆಂ.ಆರಗ 'ವಿಮರ್ಶಾ ಪ್ರಶಸ್ತಿ' ಮತ್ತು ಡಾ. ವಿಜಯಾ ಸುಬ್ಬರಾಜ್ 'ಗಣ್ಯಲೇಖಕಿ' ಪ್ರಶಸ್ತಿ ಪ್ರದಾನ

ಮೇಲಿನ ಎರಡೂ ಪ್ರಶಸ್ತಿಗಳು ಪ್ರತಿಷ್ಠಾನದ ಪ್ರತಿಷ್ಠಿತ ಕಾರ್ಯಕ್ರಮಗಳು. ಸೂ.ವೆಂ.ಆರಗ ಪ್ರಶಸ್ತಿಯು ಜುಲೈ ೨೦೧೨ರಲ್ಲಿ ಪ್ರಾರಂಭವಾಗಿ ಪ್ರಸಕ್ತ ಸಾಲಿನಲ್ಲಿ ಎಂಟನೇ ವರ್ಷದ ಪ್ರಶಸ್ತಿಯಾಗಿದೆ. ಸೂ.ವೆಂ. ಆರಗ ಅವರು ಸಂತ ಜೋಸೆಫ್ ಕಾಲೇಜಿನ ಕನ್ನಡ ಪ್ರಾಧ್ಯಾಪಕರು, ವಿಮರ್ಶಕರು ಹಾಗೂ ಸೃಜನಶೀಲ ಬರಹಗಾರರು.ಅವರ ಮಕ್ಕಳು ಶ್ರೀ ಎ.ವಿ. ರಮೇಶ್, ಶ್ರೀಮತಿ ವಿಮಲಾ ಮೂರ್ತಿ ಅವರು ತಮ್ಮ ತಂದೆಯ ಹೆಸರಿನಲ್ಲಿ ಸ್ಥಾಪಿಸಿರುವ "ವಿಮರ್ಶಾ ಪ್ರಶಸ್ತಿ" ಹತ್ತು ಸಾವಿರದ ಒಂದು ರೂಪಾಯಿ ನಗದು ಮೊತ್ತವನ್ನು ಒಳಗೊಂಡಿರುತ್ತದೆ.

ಪ್ರತಿಷ್ಠಾನದ ಕಾರ್ಯದರ್ಶಿ ಡಾ. ವಿಜಯಾ ಸುಬ್ಬರಾಜ್ ಅವರು ಸ್ಥಾಪಿಸಿರುವ 'ಗಣ್ಯಲೇಖಕಿ' ಪ್ರಶಸ್ತಿಯು ಪ್ರಾರಂಭವಾದದ್ದು ಏಪ್ರಿಲ್ ೨೦೧೫ರಲ್ಲಿ. ನಿವೃತ್ತ ಕನ್ನಡ ಪ್ರಾಧ್ಯಾಪಕಿ, ಕಥೆಗಾರ್ತಿ, ಕಾದಂಬರಿಗಾರ್ತಿ, ಕವಿಯತ್ರಿ, ಅನುವಾದಕಿ ಹೀಗೆ ಖ್ಯಾತರಾಗಿರುವ ಇವರು ಕುವೆಂಪು ಭಾಷಾಭಾರತಿ ವಿಶೇಷ ಪುರಸ್ಕಾರ, ಕರ್ನಾಟಕ ಸಾಹಿತ್ಯ ಅಕಾಡೆಮಿ ವಿಶೇಷ ಪುರಸ್ಕಾರ ಹೀಗೆ ಹಲವು ಪ್ರಶಸ್ತಿ ಪುರಸ್ಕಾರ ಪಡೆದಿರುತ್ತಾರೆ.

ಬಿ.ಎಂ.ಶ್ರೀ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಆರ್.ಲಕ್ಷ್ಮೀನಾರಾಯಣ ದತ್ತಿದಾನಿಗಳ ಪರಿಚಯವನ್ನು ಹೀಗೆ ಸಭೆಗೆ ನೀಡಿ, ನಂತರ ಪ್ರಶಸ್ತಿ ಪುರಸ್ಕತರು ಮತ್ತು ಆಯ್ಕೆ ಸಮಿತಿಯ ಸದಸ್ಯರಾದ ಡಾ.ಎಚ್.ಎಸ್. ಮಾಧವರಾವ್, ಡಾ.ಕೆ.ಪಿ.ಭಟ್ ಹಾಗೂ ಚಿಂತಾಮಣಿ ಕೊಡ್ಲೆಕೆರೆ ಮತ್ತು ಡಾ.ಎಚ್. ಎಲ್.ಪುಷ್ಪ ಅವರನ್ನು ಮತ್ತು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ಡಾ.ಪಿ.ವಿ. ನಾರಾಯಣ ಅವರು ಏಳು ವರ್ಷಗಳ ಕಾಲ ಪ್ರತಿಷ್ಠಾನವನ್ನು ಮುನ್ನಡೆಸಿ ಈಗ ಮಾರ್ಗದರ್ಶಕರಾಗಿರುತ್ತಾರೆ ಹಾಗೂ ವಚನ ಸಾಹಿತ್ಯದ ಬಗ್ಗೆ ಅಧಿಕಾರಯುತವಾಗಿ ಮಾತನಾಡಬಲ್ಲ ಖ್ಯಾತ ವಿಮರ್ಶಕ, ಸಂಶೋಧಕ ಹಾಗೂ ವಿದ್ವಾಂಸರೆಂದು ಪರಿಚಯಿಸಿ ಎಲ್ಲರನ್ನೂ ಸ್ವಾಗತಿಸಿದರು.

ನಂತರದಲ್ಲಿ ಪ್ರಶಸ್ತಿ ಸ್ವೀಕರಿಸಿದ ಶ್ರೀಮತಿ ಲಲಿತಾ ಸಿದ್ಧಬಸವಯ್ಯ ಮತ್ತು ಪ್ರೊ॥ ಸುರೇಶ್ ನಾಗಲಮಡಿಕೆಯವರು ಮಾತನಾಡಿದರು. "ಎಲ್ಲ ಸಾಹಿತಿಗಳೂ ಮಾನವೀಯ ಸೇವೆಯನ್ನೇ ಪ್ರೋತ್ಸಾಹಿಸಿದ್ದಾರೆ. ಚಲನೆ, ಬದಲಾವಣೆಗೆ, ಚಳುವಳಿಗೆ ಸಾಹಿತಿಗಳು ಯಾವತ್ತೂ ಬೆಂಬಲಿಸಿದ್ದಾರೆ. ಹಾಗೆಂದು ಅವನು ಬದ್ಧನಾಗಿರಬೇಕಾದ್ದು ರಾಜಕೀಯ ಪಕ್ಷಕ್ಕಲ್ಲ. ರಾಜಕೀಯ ವಿಚಾರಕ್ಕೆ".–ಹೀಗೆಂದು ಕವಯಿತ್ರಿ ಶ್ರೀಮತಿ ಲಲಿತಾಸಿದ್ಧಬಸವಯ್ಯ ಅವರು ಹೇಳಿದರು.

ಪ್ರೊ.ಸುರೇಶ್ ನಾಗಲಮಡಿಕೆಯವರು ಮಾತನಾಡಿ ತಮಗೆ ಬಿ.ಎಂ.ಶ್ರೀ ಪ್ರತಿಷ್ಠಾನ ಕೊಡಮಾಡುತ್ತಿರುವ ಈ ಪ್ರತಿಷ್ಠಿತ ಪ್ರಶಸ್ತಿಯೇ ಮೊದಲನೆಯದು; ಆ ಕಾರಣಕ್ಕಾಗಿ ಇದನ್ನು ಸ್ವೀಕರಿಸಲು ಸಂತೋಷವಾಗುತ್ತಿದೆ ಎಂದರು.

ಪ್ರತಿಷ್ಠಾನದ ಗೌರವಾಧ್ಯಕ್ಷ ಪ್ರೊ. ಎಂ.ಎಚ್.ಕೃಷ್ಣಯ್ಯ ಹಾಗೂ ಪ್ರತಿಷ್ಠಾನದ ಅಧ್ಯಕ್ಷರಾದ ಡಾ.ಆರ್.ಲಕ್ಷ್ಮೀನಾರಾಯಣ ಅವರು ವೇದಿಕೆಯ ಮೇಲೆ ಇದ್ದರು. ಡಾ. ವಿಜಯಾಸುಬ್ಬರಾಜ್ ಉಪಸ್ಥಿತರಿದ್ದರು. ಶ್ರೀ ಬಿ.ಎಸ್. ಗುರುಪ್ರಸಾದ್ ಅವರ ವಂದನಾರ್ಪಣೆಯೊಂದಿಗೆ ಸಮಾರಂಭ ಮುಕ್ತಾಯವಾಯಿತು.



## ಸಂಪಾದಕೀಯ

ಮಾರ್ಚಿ- ಏಪ್ರಿಲ್ ತಿಂಗಳುಗಳಲ್ಲಿ ಬಹುತೇಕವಾಗಿ ವಾಣಿಜ್ಯ ವ್ಯವಹಾರಗಳ ಬಗ್ಗೆಯ ಮಾತುಗಳು ಎಲ್ಲೆಲ್ಲೂ ಕೇಳಿಬರುತ್ತಿರುತ್ತವೆ. ಹಲವಾರು ರೀತಿಯ ಹಣಕಾಸು ವ್ಯವಹಾರಗಳ ಬಗ್ಗೆ, ವಾಣಿಜ್ಯ ವ್ಯವಹಾರಗಳ ಬಗ್ಗೆ, ಮುಂಗಾರು ಮಳೆಯ ಮುನ್ಸೂಚನೆಗಳ ಬಗ್ಗೆ, ಹಲವಾರು ಜಲಾಶಯಗಳಲ್ಲಿನ ನೀರಿನ ಮಟ್ಟಗಳ ಬಗ್ಗೆ, ವಿವಿಧ ರೀತಿಯ ತೆರಿಗೆ ದರಗಳ ಬಗ್ಗೆ ಹಾಗೂ ಇಂತಹ ಹಲವಾರು ವಿಷಯಗಳ ಬಗ್ಗೆ ದೇಶದ ಜನತೆ ಆತಂಕದಿಂದ, ಕುತೂಹಲದಿಂದ ಹಾಗೂ ಉತ್ಸಾಹದಿಂದ ತಿಳಿದುಕೊಳ್ಳಲು, ವಿಶ್ಲೇಷಿಸಲು, ನಿರೀಕ್ಷಿಸಲು ಆಸಕ್ತಿ ವಹಿಸುತ್ತಾರೆ.
ಹಣಕಾಸು ವ್ಯವಹಾರಗಳು, ವಾಣಿಜ್ಯ ವ್ಯವಹಾರಗಳು ಇತ್ಯಾದಿಗಳು ನಮ್ಮ ಜೀವನಗಳ ಅಗತ್ಯಗಳಾಗಿದ್ದರೂ, ಕನ್ನಡ ಸೃಜನ ಶೀಲ ಸಾಹಿತ್ಯದಲ್ಲಿ ಇಂತಹ ವಿಷಯಗಳನ್ನು ಒಳಗೊಂಡಿರುವ ಕೃತಿಗಳು ಬಹಳ ಕಡಿಮೆ ಸಂಖ್ಯೆಯಲ್ಲಿ ಕಂಡು ಬರುತ್ತವೆ. ಅದೇ ರೀತಿ ನಾಟಕ, ಕವನ ಹಾಗೂ ಟಿವಿ ಕಾರ್ಯಕ್ರಮಗಳಲ್ಲಿಯೂ ವಾಣಿಜ್ಯ ವ್ಯವಹಾರಗಳು ಅಂತರ್ಗತಗೊಂಡಿರುವ ಸೃಜನಶೀಲ ಕಥೆ ಕಾದಂಬರಿಗಳ ಸಂಖ್ಯೆ ಹೆಚ್ಚಿಲ್ಲ. ಜೊತೆಗೆ ಪುಸ್ತಕ ಬಹುಮಾನಗಳು, ಪ್ರಶಸ್ತಿಗಳನ್ನು ಗಳಿಸಿರುವ ಕೃತಿಗಳ ಪೈಕಿ ವಾಣಿಜ್ಯ ಹಾಗೂ ಸಂಬಂಧಿಸಿದ ವ್ಯವಹಾರಗಳ ಕಥಾವಸ್ತು ಹೊಂದಿರುವ ಕೃತಿಗಳು ಹೆಚ್ಚು ಆಯ್ಕೆಗೊಂಡಿರುವುದರ ಬಗ್ಗೆ ಮಾಹಿತಿಗಳು ಲಭ್ಯವಿಲ್ಲ. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ವಾರ್ಷಿಕವಾಗಿ ಸುಮಾರು ೩೦೦೦ ಬಹುಮಾನ ಹಾಗೂ ಪ್ರಶಸ್ತಿಗಳನ್ನು ನೀಡಲಾಗುತ್ತಿದ್ದರೂ, ಈ ಪ್ರಕಾರದ ಕೃತಿಗಳಿಗಾಗಿ ಮೀಸಲಿಡಲಾದ ಬಹುಮಾನಗಳು ಹಾಗೂ ಪ್ರಶಸ್ತಿಗಳ ಬಗ್ಗೆ ಮಾಹಿತಿಗಳು ಲಭ್ಯವಿಲ್ಲ.
ಕನ್ನಡ ಲೇಖಕರು ಈ ನಿಟ್ಟಿನಲ್ಲಿ ಚಿಂತನೆ ಮಾಡಬೇಕಾಗಿದೆ.

ಬಿ.ಆರ್ ರವೀಂದ್ರನಾಥ್
ಸಂಪಾದಕರು

## ಮೇ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

**ಮಾಹಿತಿ ಸಂಗ್ರಹ: ಶ್ರೀ ಬುಕ್ಕಾಂಬುಧಿ ಸತ್ಯನಾರಾಯಣ**

### ಬಿ.ಪುಟ್ಟಸ್ವಾಮಯ್ಯ;

ಹೆಸರು: ಬಸಪ್ಪ ಪುಟ್ಟಸ್ವಾಮಯ್ಯ
ಕಾವ್ಯನಾಮ; ಬಿ. ಪುಟ್ಟಸ್ವಾಮಯ್ಯ
ಹುಟ್ಟಿದ ಸ್ಥಳ- ದಿನಾಂಕ ಬೆಂಗಳೂರು, ೨೪-೦೫-೧೮೯೭
ತಂದೆ-ತಾಯಿ; ಬಸಪ್ಪ, ಮಲ್ಲಮ್ಮ
ಶಿಕ್ಷಣ; ೯ನೇ ತರಗತಿ
ವೃತ್ತಿ; ಸಾಹಿತ್ಯ, ರಂಗಭೂಮಿ, ಮತ್ತು ಪತ್ರಿಕೋದ್ಯಮ
ಸಾಹಿತ್ಯಸಾಧನೆಗಳು; ಷಾಜಹಾನ್, ಕುರುಕ್ಷೇತ್ರ ಮುಂತಾದ ೨೫ಕ್ಕೂ ಹೆಚ್ಚು ನಾಟಕಗಳು, ತೇಜಸ್ವಿನಿ,ಅಭಿಸಾರಿಕೆ ಮುಂತಾದ ೨೨ಕ್ಕೂಹೆಚ್ಚು ಕಾದಂಬರಿಗಳು,ಕನ್ನಡ ರಂಗಭೂಮಿ ನಡೆದುಬಂದ ದಾರಿ ಮತ್ತು ಇತರ ಕೃತಿಗಳನ್ನು ರಚಿಸಿದ್ದಾರೆ
ಪ್ರಶಸ್ತಿ-ಗೌರವಗಳು; ೧೯೬೪ ರಲ್ಲಿ ಕೇಂದ್ರ ಸಾಹಿತ್ಯ ಅಕಾಡಮಿ ಪ್ರಶಸ್ತಿ[ ಕ್ರಾಂತಿ ಕಲ್ಯಾಣ ಕೃತಿಗೆ ], ೧೯೬೫ ರಲ್ಲಿ ಕರ್ನಾಟಕ ಸಾಹಿತ್ಯಅಕಾಡಮಿ ಪ್ರಶಸ್ತಿ, ಜನ್ಮಭೂಮಿ ಟ್ರಸ್ಟ್ ಪ್ರಶಸ್ತಿ, ೧೯೭೮ರಲ್ಲಿ ಕೇಂದ್ರ ಸಂಗೀತ ನಾಟಕ ಅಕಾಡಮಿ ಪ್ರಶಸ್ತಿ , ಕನ್ನಡ ಸಾಹಿತ್ಯ ಪರಿಷತ್ತಿನ ಅಭಿನಂದನೆ, ಹೀಗೆಹಲವು ಪ್ರಶಸ್ತಿ ಗೌರವಗಳನ್ನು ಪಡೆದ ಪುಟ್ಟಸ್ವಾಮಯ್ಯ ಪ್ರಜಾವಾಣಿ ಪತ್ರಿಕೆಯ ಮೊದಲ ಸಂಪಾದಕರಾಗಿ ಸೇವೆ ಸಲ್ಲಿಸಿರುತ್ತಾರೆ.
ನಿಧನ; ೨೫-೦೧-೧೯೮೪ ರಂದು ಇಹಲೋಕತ್ಯಜಿಸಿದರು

### ಅ.ನ. ಕೃಷ್ಣರಾಯ

ಹೆಸರು: ಅರಕಲಗೂಡು ನರಸಿಂಗರಾವ್ ಕೃಷ್ಣರಾವ್
ಕಾವ್ಯನಾಮ; 'ಅ.ನ. ಕೃ'
ಹುಟ್ಟಿದ ಸ್ಥಳ- ದಿನಾಂಕ; ಕೋಲಾರ, ೦೯-೦೫-೧೯೦೮
ತಂದೆ-ತಾಯಿ; ನರಸಿಂಗರಾಯರು, ಅನ್ನಪೂರ್ಣಮ್ಮ
ಶಿಕ್ಷಣ; ಮಾಹಿತಿ ಇಲ್ಲ
ವೃತ್ತಿ; ಕಾದಂಬರಿಕಾರ, ನಾಟಕಕಾರರು, ಕತೆಗಾರರು, ಸಂಪಾದಕರು ಮತ್ತು ವಿಮರ್ಶಕರು.
ಸಾಹಿತ್ಯಸಾಧನೆಗಳು; ಅ.ನ.ಕೃರವರ ಒಟ್ಟು ಕೃತಿಗಳ ಸಂಖ್ಯೆ೧೯೦, ಅವುಗಳಲ್ಲಿ ೧೧೨ ಕಾದಂಬರಿಗಳು ೯ ಕಥಾಸಂಗ್ರಹಗಳು ೨೪ ನಾಟಕಗಳು ೨೪ ವಿಮರ್ಶೆ ಹಾಗೂ ಪ್ರಬಂಧ ಸಂಕಲನಗಳು,೯ ಜೀವನಚರಿತ್ರೆಗಳು, ೩ ಅನುವಾದಗಳು, ೯ ಸಂಪಾದಿತ ಗ್ರಂಥಗಳು ಸೇರಿವೆ.
ಸಂಧ್ಯಾರಾಗ, ಉದಯರಾಗ, ಸಾಹಿತ್ಯರತ್ನ, ನಟಸಾರ್ವಭೌಮ ಮೊದಲಾದವು ಪ್ರಖ್ಯಾತವಾಗಿವೆ.
ಕರ್ನಾಟಕ ಕಾದಂಬರಿ ಸಾರ್ವಭೌಮ ಎಂದೇ ಅವರು ಪ್ರಖ್ಯಾತರಾದವರು. ಕನ್ನಡ ನಾಡಿನ ಏಕೀಕರಣಕ್ಕಾಗಿ ತಮ್ಮ ಜೀವನವನ್ನೇ ಮುಡಿಪಿಟ್ಟಿದ್ದರು,"ನನ್ನಂಥವರು ಕನ್ನಡಕ್ಕೆ ಅನೇಕರಿದ್ದಾರೆ, ಆದರೆ ನನಗಿರುವುದು ಒಂದೇ ಕನ್ನಡ",ಎಂಬ ಅವರ ಮಾತು ಕನ್ನಡಪರ ಹೋರಾಟಗಾರರಿಗೆ ಪ್ರೇರಣೆಯಾಗಿತ್ತು
ಪ್ರಶಸ್ತಿ-ಗೌರವಗಳು; ಅ.ನ.ಕೃರವರು ೧೯೬೦ ರಲ್ಲಿ ಮಣಿಪಾಲದಲ್ಲಿ ನಡೆದ ೪೨ನೇ ಕನ್ನಡ ಸಾಹಿತ್ಯಸಮ್ಮೇಳನದ ಅಧ್ಯಕ್ಷರಾಗಿದ್ದರು.
ಮೈಸೂರು ವಿಶ್ವವಿದ್ಯಾನಿಲಯವು ಆ.ನ.ಕೃ ರವರಿಗೆ ಗೌರವ ಪದವಿನೀಡಿ ಗೌರವಿಸಿತು. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದಿದ್ದ ಅ.ನ.ಕೃ ಅದರ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದ್ದರು. "ರಸಚೇತನ", ಎಂಬುದು ಅ.ನ.ಕೃ ಅಭಿನಂದನಾಗ್ರಂಥ
ನಿಧನ; ೦೮-೦೭-೧೯೭೧ರಂದು ವಿಧಿವಶರಾದರು.

೭ನೇ ಪುಟಕ್ಕೆ

## ಪ್ರಕಟಣೆ

## ನುಡಿ ಆರಾಧಕರ ಸ್ಮರಣೆ ಸರಣಿ ಕಾರ್ಯಕ್ರಮ

ದಿನಾಂಕ : ೨೯-೦೫-೨೦೧೯ ರಂದು ಬಿ.ಎಂ.ಶ್ರೀ ಪ್ರತಿಷ್ಠಾನವು ನೂತನವಾಗಿ ಹಮ್ಮಿಕೊಂಡಿರುವ ನುಡಿ ಆರಾಧಕರ ಸ್ಮರಣೆ ಸರಣಿ ಕಾರ್ಯಕ್ರಮದ ಅಡಿಯಲ್ಲಿ ಕನ್ನಡ ಸಾಹಿತ್ಯಕ್ಕೆ ಅಪಾರ ಸೇವೆ ಸಲ್ಲಿಸಿರುವ ಶ್ರೀ ಬಿ.ಪುಟ್ಟಸ್ವಾಮಯ್ಯ, ಶ್ರೀ ಆನಕೃ, ಶ್ರೀ ಭಾರತಿಸುತ, ಶ್ರೀ ಶಂಕರಮೊಕಾಶಿ ಪುಣೇಕರ, ಶ್ರೀ ಕಡೆಂಗೋಡ್ಲು ಶಂಕರಭಟ್ಟ. ಶ್ರೀಡಿ. ಎಲ್.ನರಸಿಂಹಚಾರ್ಯ ಅವರುಗಳ ಬದುಕು ಬರಹಗಳ ಬಗ್ಗೆ ವಿಚಾರ ಮಂಡನೆ ಮಾಡಲು ಸಾಹಿತ್ಯಾಸಕ್ತರಿಗೆ ಆಹ್ವಾನ ನೀಡಲಾಗುತ್ತಿದೆ. ಉತ್ತಮ ವಿಚಾರಗಳನ್ನು ಮಂಡಿಸುವವರಿಗೆ ಬಹುಮಾನಗಳನ್ನು ನೀಡಲಾಗುವುದು.

ವಿಚಾರ ಮಂಡನೆ ಮಾಡಲು ನೋಂದಾಯಿಸಿಕೊಳ್ಳಲು ಕೊನೆಯ ದಿನಾಂಕ ೨೦ನೇ ಮೇ ೨೦೧೯. ವಿವರಗಳಿಗೆ ಸಂಪರ್ಕಿಸಿ : ಬಿ.ಎಂ.ಶ್ರೀ ಪ್ರತಿಷ್ಠಾನ, ೩ನೇ ಮುಖ್ಯರಸ್ತೆ, ನ.ರಾ.ಕಾಲೋನಿ, ಬೆಂಗಳೂರು-೫೬೦೦೧೯, ದೂರವಾಣಿ ಸಂಖ್ಯೆ: ೨೬೬೧೫೮೭೭, ೨೬೬೭೬೭೭೩

## ಹಸ್ತಪ್ರತಿ ವಿಭಾಗ ಮತ್ತು ಗ್ರಂಥಾಲಯದ ವರದಿ

ಕಾಗದದ ಹಸ್ತಪ್ರತಿಗಳ ಸಂರಕ್ಷಣಾಕಾರ್ಯ ಪ್ರಾರಂಭವಾಗಿದ್ದು, ಈ ತಿಂಗಳಿನಲ್ಲಿ ಇಪ್ಪತ್ತು ಹಸ್ತಪ್ರತಿಗಳನ್ನು ಶುದ್ಧಿಕರಿಸಿ, ಸಂರಕ್ಷಿಸಿ ಇಡಲಾಗಿದೆ. ಇವುಗಳಲ್ಲಿ ಕೆಲವುಗಳನ್ನು ಡಿಜಿಟೈಸ್ ಮಾಡಲಾಗಿದೆ.

# ಮೇ ೨೦೧೯ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿ.ಎಂ.ಶ್ರೀ. ಪ್ರತಿಷ್ಠಾನ



### ೦೮ -೦೫-೨೦೧೯ ಬುಧವಾರ ಸಂಜೆ- ೫-೩೦ಗಂಟೆಗೆ

**"ಅಕ್ಕರಗೊಟ್ಟಿ"-೫೦**

ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ : ಸಮಾಜ ಶಾಸ್ತ್ರ ಮತ್ತು ನಮ್ಮ ಅನುಭವ

ಚಾಲನೆ ನೀಡುವವರು : ಡಾ. ಸಿ.ಎಸ್. ಮಹೇಶ್‌ಕುಮಾರ್



### ೧೫-೦೫-೨೦೧೯ ಬುಧವಾರ ಸಂಜೆ ೪-೦೦ ಗಂಟೆಗೆ

**ಸಾಹಿತ್ಯ ಸಂಚಲನ -೧೦**

ಬಿ.ಎಂ.ಶ್ರೀ ಪ್ರತಿಷ್ಠಾನದ ಸಹಯೋಗದಲ್ಲಿ

ಕರ್ನಾಟಕ ಲೇಖಕಿಯರ ಸಂಘದ ಕಾರ್ಯಕ್ರಮ

ಮುಖ್ಯ ಅತಿಥಿ: **ಡಾ॥ ವಿಜಯಾ ಸುಬ್ಬರಾಜ್**

ನಿವೃತ್ತ ಅಧ್ಯಾಪಕಿ, ಸಾಹಿತಿ, ಬಿ.ಎಂ.ಶ್ರೀ ಪ್ರತಿಷ್ಠಾನದ ಗೌರವ ಕಾರ್ಯದರ್ಶಿ

ಉಪನ್ಯಾಸದ ವಿಷಯ: 'ಮನು ಅವರ ಮಹಾಸಂಪರ್ಕ' ಒಂದು ಅವಲೋಕನ



### ೧೯-೫-೨೦೧೯ ಭಾನುವಾರ ಬೆಳಿಗ್ಗೆ-೧೦-೩೦ಗಂಟೆಗೆ

**ಡಿ.ವಿ.ಜಿ. ಕ.ವೆಂ.ರಾಘವಾಚಾರ್ ದತ್ತಿ**

ವಿಷಯ : ವಿಚಾರ ಸಂಕಿರಣ-ಸುದ್ದಿ ವಾಹಿನಿಗಳ ಸುತ್ತ ಮುತ್ತ

ವಿಷಯ : ಸುದ್ದಿ ವಾಹಿನಿಗಳಲ್ಲಿ ಬಳಕೆಯಾಗುತ್ತಿರುವ ಭಾಷೆ

ಮಂಡನೆ : ಶ್ರೀ ರಂಗನಾಥ ಭಾರದ್ವಾಜ, ಟಿ.ವಿ.-೯ ಸುದ್ದಿವಾಹಿನಿಯ ಮುಖ್ಯ ಕಾರ್ಯನಿರ್ವಾಹಕರು

ವಿಷಯ : ಸುದ್ದಿ ವಾಹಿನಿಗಳು ಮತ್ತು ಸಾಮಾಜಿಕ ಜವಾಬ್ದಾರಿ

ಮಂಡನೆ :: ಶ್ರೀ ಪ್ರೇಮ್‌ಕುಮಾರ್ ಹರಿಯಬ್ಬೆ, ಖ್ಯಾತ ಪತ್ರಕರ್ತರು

ಅಧ್ಯಕ್ಷತೆ : ಶ್ರೀ ಮಹಾದೇವ ಪ್ರಕಾಶ್

ಖ್ಯಾತ ಪತ್ರಕರ್ತರು , 'ಈ ಭಾನುವಾರ' ಸಂಪಾದಕರು

### ೨೩-೦೫-೨೦೧೯ ಗುರುವಾರ ಸಂಜೆ-೫-೩೦ ಗಂಟೆಗೆ

**ಹಳಗನ್ನಡ ತರಗತಿಗಳ ಸಮಾರೋಪ : ಪ್ರಮಾಣಪತ್ರ ವಿತರಣೆ**

ಮುಖ್ಯ ಅತಿಥಿಗಳು : ಡಾ. ಬಸವರಾಜ ಕಲ್ಗುಡಿ

(ನಿವೃತ್ತ ಪ್ರಾಧ್ಯಾಪಕರು ಮತ್ತು ಸಂಶೋಧಕರು)

### ೨೬-೫-೨೦೧೯ ಭಾನುವಾರ ಬೆಳಿಗ್ಗೆ- ೧೦-೩೦ ಗಂಟೆಗೆ

**ಶ್ರೀ ಬೇಟೆರಾಯದೀಕ್ಷಿತ್, ಪ್ರೊ.ಬಿ.ರಾಮಸ್ವಾಮಿ, ಶ್ರೀಮತಿ ಎಚ್.ವಿ. ಸಾವಿತ್ರಮ್ಮ ರಾಮಸ್ವಾಮಿ ಮತ್ತು ಶ್ರೀ ಎಸ್. ಶ್ರೀಕಂಠಯ್ಯ ದತ್ತಿ ಕಾರ್ಯಕ್ರಮ**

ಜನಪದ ಮಹಾಕಾವ್ಯಗಳನ್ನು ಕುರಿತ ವಿಚಾರ ಸಂಕಿರಣ

ವಿಷಯ : **ಜನಪದ ಮಹಾಕಾವ್ಯಗಳ ಸ್ವರೂಪ ಮತ್ತು ದೃಷ್ಟಿ (ಪ್ರಾತ್ಯಕ್ಷಿತೆಯೊಂದಿಗೆ)**

ಮಂಡನೆ : ಡಾ. ಯು.ಎಂ.ರವಿ., ಕನ್ನಡ ಅಧ್ಯಾಪಕರು

ವಿಷಯ : ಜನಪದ ಮಹಾಭಾರತ

ಮಂಡನೆ : **ಡಾ. ಚಕ್ಕರೆ ಶಿವಶಂಕರ್,** ಖ್ಯಾತ ಜಾನಪದ ವಿದ್ವಾಂಸರು

ಅಧ್ಯಕ್ಷತೆ : ಡಾ. ರಂಗಾರೆಡ್ಡಿ ಕೋಡಿರಾಂಪುರ

ನಿವೃತ್ತ ಪ್ರಾಧ್ಯಾಪಕರು ಮತ್ತು ಜಾನಪದ ವಿದ್ವಾಂಸರು

### ೨೯-೫-೨೦೧೯ ಬುಧವಾರ ಸಂಜೆ- ೫-೦೦ ಗಂಟೆಗೆ

**ನುಡಿಯಾರಾಧಕರ ಸ್ಮರಣೆ ಕಾರ್ಯಕ್ರಮ**

ಶ್ರೀ ಬಿ.ಪುಟ್ಟಸ್ವಾಮಯ್ಯ, ಶ್ರೀ ಅನಕೃ, ಶ್ರೀ ಭಾರತಿಸುತ, ಶ್ರೀ ಶಂಕರಮೊಕಾಶಿ ಪುಣೇಕರ, ಶ್ರೀ ಕಡೆಂಗೋಡ್ಲು ಶಂಕರಭಟ್ಟ, ಶ್ರೀಡಿ.ಎಲ್.ನರಸಿಂಹಚಾರ್ಯ ಅವರುಗಳ ಬದುಕು ಬರಹಗಳ ಬಗ್ಗೆ ವಿಚಾರ ಮಂಡನೆ

# ಬಿ.ಎಂ.ಶ್ರೀ ಪ್ರತಿಷ್ಠಾನದ ಕಾರ್ಯಕ್ರಮಗಳು

## ೨೬-೩-೨೦೧೮
## "ಅಕ್ಕರಗೊಟ್ಟಿ"-೪೭

**ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ**

**ವಿಷಯ : ಷಟ್ಪದಿ ಕಾವ್ಯಗಳ ಸೂತ್ರ ಪದ್ಯಗಳು**



ಚಾಲನೆ ನೀಡುವವರು :ಡಾ. ಆರ್. ಲಕ್ಷ್ಮೀನಾರಾಯಣ

ಪ್ರತಿಷ್ಠಾನದ ಅಧ್ಯಕ್ಷರಾದ ಶ್ರೀ ಆರ್. ಲಕ್ಷ್ಮೀನಾರಾಯಣ ಅವರು ವಿಷಯವನ್ನು ಪ್ರಸ್ತಾಪಿಸುತ್ತ ಷಟ್ಪದಿ ಕಾವ್ಯಗಳ ಪ್ರತಿ ಸಂಧಿಯ ಪ್ರಾರಂಭದಲ್ಲಿ ಬರುವ ಮೂರು ಸಾಲುಗಳಲ್ಲಿ(ಅರ್ಧ ಷಟ್ಪದಿಯಲ್ಲಿ) ಆ ಸಂಧಿಯಲ್ಲಿನ ಕಥಾಸಂದರ್ಭದಲ್ಲಿ ಬರುವ ಮುಖ್ಯ ಕಥೆಯನ್ನು ಅತ್ಯಂತ ಸಂಗ್ರಹವಾಗಿ ನಿರೂಪಿಸುವ ವಿಧಾನ ತಮ್ಮನ್ನು ಮೊದಲಿನಿಂದ ವಿಶೇಷವಾಗಿ ಸೆಳೆದಿದ್ದರ ಬಗ್ಗೆ ಹೇಳಿದರು. ಅದರಲ್ಲೂ ಕುಮಾರವ್ಯಾಸ ಭಾರತದಲ್ಲಿನ ಪ್ರತಿ ಸಂಧಿಯ ಮೊದಲಿಗೇ ಆ ಸಂಧಿಯಲ್ಲಿನ ಕಥಾಭಾಗವನ್ನು ಶಕ್ತ ಮಾತುಗಳಲ್ಲಿ ಸಂಗ್ರಹಿಸುವ ರೀತಿ ಮೋಡಿಮಾಡಿದ್ದರ ಬಗ್ಗೆ ಹೇಳಿದರು.ಇವುಗಳಿಗೆ ಸೂಚನಾ ಪದ್ಯಗಳೆಂದು, ಸೂತ್ರ ಪದ್ಯಗಳೆಂದು ಹೇಳುವ ರೂಢಿ ಇದೆ. ಉದಾಹರಣೆಗೆ ಅರಣ್ಯ ಪರ್ವದಲ್ಲಿ ಬರುವ ಕಿರಾತಾರ್ಜುನೀಯ ಪ್ರಸಂಗವನ್ನು ಪ್ರಾರಂಭದ ಸೂಚನಾ ಪದ್ಯದಲ್ಲಿ (೪ನೇ ಸಂಧಿ)

ಭಜಿಸಿದನು ನರನಿಂದ್ರ ಕೀಲದೊ
೪ಜ ಸುರಾರ್ಚಿತ ಚರಣ ಕಮಲನ
ತ್ರಿಜಗದಧಿಪತಿಯನು ಮಹಾನಟರಾಯ ಧೂರ್ಜಟಿಯ- ಎಂದು ಸೊಗಸಾಗಿ ಸಂಗ್ರಹಿಸಿ ಕೊಡುತ್ತಾನೆ.

ಹೀಗೆ ಸಂಧಿಯ ಸೂಚನಾ ಪದ್ಯಗಳಲ್ಲಿ ಆ ಕಥಾಭಾಗವನ್ನು ಸಂಗ್ರಹವಾಗಿ ಹೇಳುವ ಪದ್ಧತಿಯನ್ನು ಪ್ರಾರಂಭಿಸಿದವನು ಷಟ್ಪದಿ ಕಾವ್ಯದ ಪ್ರವರ್ತಕನೆನಿಸಿದ ರಾಘವಾಂಕನೇ. ಅವನಿಂದ ಪ್ರಾರಂಭವಾದ ಈ ಪದ್ಧತಿ ಮುಂದೆ ಮುದ್ದಣನವರೆಗೆ ಎಲ್ಲ ಷಟ್ಪದಿ ಕಾವ್ಯಗಳಲ್ಲಿ ಅಬಾಧಿತವಾಗಿ ಮುಂದುವರೆದಿದೆ. ಇದಕ್ಕೆ ಪ್ರೇರಣೆ ಎಲ್ಲಿಂದ ಬಂದಿರಬೇಕೆಂದು ಯೋಚಿಸಿದಾಗ ರಾಘವಾಂಕನ ಗುರುವೂ ಸೋದರಮಾವನೂ ಆದ ಹರಿಹರನ ಕಡೆಗೆ ನನ್ನ ದೃಷ್ಟಿ ಹೋಯಿತು. ಅವನು ತನ್ನ ಪ್ರತಿ ರಗಳೆಯನ್ನು ಪ್ರಾರಂಭಿಸುವುದೇ ಒಂದು ಕಂದ ಪದ್ಯದಿಂದ ಮತ್ತು ಅದರ ಮುಕ್ತಾಯವೂ ಕಂದ ಪದ್ಯದಿಂದಲೇ ವಿರೂಪಾಕ್ಷನ ಮುದ್ರಿಕೆಗಳೆಂದೇ ಇವು ಹೆಸರಾಗಿವೆ. ಇದರಲ್ಲಿ ಯಾರ ಕಥೆ, ಯಾರ ಮಹಿಮೆಯನ್ನು ಕುರಿತದ್ದು ಈ ರಗಳೆ ಎಂಬುದನ್ನು ಮಾತ್ರ ಸೂಚಿಸಲಾಗಿರುತ್ತದೆ. ಕಥಾಭಾಗವನ್ನಲ್ಲ. ಉದಾಹರಣೆಗೆ ಅತಿಭಕ್ತನ ರಗಳೆ:

ನುತ ಹರಿವಿರಿಂಚಿವಂದ್ಯಂ
ವಿತತ ಯಶೋರಾಶಿಯೆನಿಪ ಪಂಪಾನಾಥಂ
ಅತಿಭಕ್ತರ ಭಕ್ತಿಗೆ ತಾ
ನತಿಶಯವರಮೆರೆದನೀ ಧರೆಯರಿಯಲ್

ಆದರೆ ಅದೇ ದೀರ್ಘ ರಗಳೆಗಳಲ್ಲಿ(ನಂಬಿಯಣ್ಣನ ರಗಳೆ, ಬಸವರಾಜ ದೇವರ ರಗಳೆ, ಅಕ್ಕಮಹಾದೇವಿ ರಗಳೆ ಇತ್ಯಾದಿ) ಒಂದೊಂದು ಸ್ಥಲದ ಪ್ರಾರಂಭದಲ್ಲೂ ಒಂದೊಂದು ವೃತ್ತದಲ್ಲಿ ಆ ಸ್ಥಲದ ಕಥಾ ಘಟ್ಟವನ್ನು ನಿರ್ದೇಶಿಸುತ್ತಾನೆ. ಮುಂದೆ ರಗಳೆಯಲ್ಲಿ ಅದರ ಕಥೆ ಮುಂದುವರಿದಿರುತ್ತದೆ. ಎಂದು ಕೆಲವು ದೀರ್ಘ ರಗಳೆಗಳ ಪ್ರಾರಂಭದ ವೃತ್ತಗಳನ್ನು ಉಲ್ಲೇಖಿಸಿದರು. ಬಹುಶಃ ಹರಿಹರನ ಈ ಮೇಲ್ಪಂಕ್ತಿಯನ್ನನುಸರಿಸಿ ರಾಘವಾಂಕನು ಷಟ್ಪದಿಯ ಮೂರು ಸಾಲುಗಳಲ್ಲಿ ಆಯಾಸಂಧಿಯ ಕಥಾಭಾಗವನ್ನು ಸಂಕ್ಷಿಪ್ತವಾಗಿ ಹೇಳುವ ಪದ್ಧತಿಯನ್ನು ಅಳವಡಿಸಿಕೊಂಡಿರಬೇಕು ಎಂದು ಹೇಳಿದರು. ಹರಿಹರನಿಗೆ ಇದಕ್ಕೆ ಪ್ರೇರಣೆ ಬಹುಶಃ ವಡ್ಡಾರಾಧನೆಯಿಂದ ದೊರೆತಿರಬಹುದು. ಕಾರಣ ಅಲ್ಲಿನ ಪ್ರತಿ ಕಥೆಯ ಪ್ರಾರಂಭದಲ್ಲಿ ಎರಡು ಸಾಲಿನ ಒಂದು ಪ್ರಾಕೃತ ಗಾಥೆ ಬರುತ್ತದೆ. ಅನಂತರದಲ್ಲಿ ಆ ಗಾಥೆಯ ಪ್ರತಿಪದದ ಟೀಕೆ, ವ್ಯಾಖ್ಯಾನ ನೀಡಿ ಕಥೆಯನ್ನು ಗದ್ಯದಲ್ಲಿ ಮುಂದುವರೆಸುವುದು ವಡ್ಡಾರಾಧನೆಯ ವಿಧಾನ- ಎಂದು ಹೇಳಿ ಅದಕ್ಕೆ ಸುಕುಮಾರ ಸ್ವಾಮಿಯ ಕಥೆ ಮತ್ತು ವಿದ್ಯುಚ್ಚೋರನ ಕಥೆಯಲ್ಲಿ ಬರುವ ಪ್ರಾಕೃತ ಗಾಹೆಗಳು ಮತ್ತು ಅಲ್ಲಿರುವ ಅವುಗಳ ಟೀಕುಗಳನ್ನು ಉಲ್ಲೇಖಿಸಿದರು.

ಇದನ್ನೆಲ್ಲ ನೋಡಿದಾಗ ಷಟ್ಪದೀ ಕಾವ್ಯಗಳಲ್ಲಿ ಬರುವ ಸೂಚನಾ ಪದ್ಯಗಳಿಗೆ ಹರಿಹರನ ರಗಳೆಗಳಲ್ಲಿ ಬರುವ ವೃತ್ತಗಳು ಮೇಲ್ಪಂಕ್ತಿಯಾಗಿರಬೇಕು ಅಥವಾ ಅದಕ್ಕೂ ಹಿಂದೆ ಹೋದರೆ ವಡ್ಡಾರಾಧನೆಯಲ್ಲಿ ಮುಂದೆ ನಿರೂಪಿತವಾಗುವ ಕಥೆಯ ಸಾರಾಂಶವನ್ನು ಪ್ರಾರಂಭದಲ್ಲಿ ಬರುವ ಪ್ರಾಕೃತಗಾಹೆಗಳಲ್ಲಿ ಹೇಳುವ ವಿಧಾನವೇ ಮೇಲ್ಪಂಕ್ತಿಯಾಗಿರಬೇಕು ಎಂದು ಹೇಳಿದರು. ಅನಂತರ ನಡೆದ ಚರ್ಚೆಯಲ್ಲಿ ಡಾ. ಪಿ. ವಿ. ನಾರಾಯಣ, ಡಾ. ವಿಜಯಾ ಸುಬ್ಬರಾಜ್ ಮೊದಲಾದವರು ಪಾಲ್ಗೊಂಡಿದ್ದರು.

## ೧೫-೪-೨೦೧೯
## ಡಾ. ಉಪ್ಪಂಗಳ ರಾಮಭಟ್ಟ, ಸುಬ್ಬಯ್ಯ ಹೆಗಡೆ ಶಾಸ್ತ್ರೀ ಮತ್ತು ಎಂ. ಕೆ. ವಿಜಯಲಕ್ಷ್ಮೀ ದತ್ತಿ ಉಪನ್ಯಾಸ

**ವಿಷಯ: ಕನ್ನಡ ಕಾವ್ಯದ ಈಚಿನ ಪ್ರವೃತ್ತಿಗಳು**

**ಉಪನ್ಯಾಸಕರು: ಡಾ. ರಾಮಲಿಂಗಪ್ಪ .ಟಿ. ಬೇಗೂರು.**



ಪ್ರಾರಂಭದಲ್ಲಿ ಅಧ್ಯಕ್ಷ ಆರ್.ಲಕ್ಷ್ಮೀನಾರಾಯಣ ಅವರು ದತ್ತಿ ಏರ್ಪಡಿಸಿರುವ ದಾನಿಗಳಾದ ಡಾ.ಉಪ್ಪಂಗಳ ರಾಮಭಟ್ಟ, ತಮ್ಮ ತಂದೆಯವರಾದ ಎಂ.ಕೆ. ಸುಬ್ಬಯಹೆಗಡೆ ಶಾಸ್ತ್ರೀ, ಮತ್ತು ತಮ್ಮ ಶ್ರೀಮತಿ ಎಂ.ಕೆ. ವಿಜಯಲಕ್ಷ್ಮೀ ಅವರುಗಳ ನೆನಪಿನಲ್ಲಿ ಶ್ರೀ ಎಂ. ಕೆ. ರವೀಂದ್ರನಾಥ್ ಅವರು ದತ್ತಿ ಸ್ಥಾಪಿಸಿರುವ ಬಗ್ಗೆ ಪರಿಚಯ ಮಾಡಿಕೊಟ್ಟರು. ನಂತರದಲ್ಲಿ ಉಪನ್ಯಾಸಕರಾದ ಡಾ॥ ರಾಮಲಿಂಗಪ್ಪನವರನ್ನು ಪರಿಚಯಿಸಿ ಎಲ್ಲರನ್ನೂ ಸ್ವಾಗತಿಸಿದರು.

ಕನ್ನಡ ಕಾವ್ಯಕ್ಕೆ ವಿಸ್ತಾರವಾದ ಹಾಸು-ಬೀಸು ಇದ್ದು ೨೦ನೇ ಶತಮಾನ ನವೋದಯ, ನವ್ಯ ದಲಿತ- ಬಂಡಾಯ, ಮಹಿಳಾ ಸಂವೇದನೆ ಮೊದಲಾದ ಹಲವು ಬಗೆಯ ಚಳುವಳಿಗಳನ್ನು ಕಂಡ ಕಾಲ. ನಿಸರ್ಗ ಪ್ರೀತಿ, ರಾಷ್ಟ್ರೀಯತೆ, ದೇಶಭಕ್ತಿ, ವ್ಯಕ್ತಿ-ಸ್ವಾತಂತ್ರ್ಯ, ಮಾನವತಾವಾದ ಮೊದಲಾದವು ನವೋದಯ ಕಾವ್ಯದ ಪ್ರವೃತ್ತಿಗಳಾದರೆ, ಅನಂತರದಲ್ಲಿ ಬಂದ ನವ್ಯದ ಕಾಲದಲ್ಲಿ ವ್ಯಕ್ತಿ-ಪ್ರಜ್ಞೆ ಮುಖ್ಯವಾಗಿ, ವ್ಯಕ್ತಿಯ ಒಳಗನ್ನು, ಅವನ ದೌರ್ಬಲ್ಯ, ಹಲ್ಕಾತನ, ದಗಲ್ಬಾಜಿತನ, ಕೀಳರಿಮೆಗಳನ್ನು ಶೋಧಿಸುವ ಪ್ರವೃತ್ತಿಯಾಗಿತ್ತು.. ದಲಿತಬಂಡಾಯದ ಕಾಲದಲ್ಲಿ, ಸಮಾಜದ ಅನ್ಯಾಯಗಳು, ಅಸ್ಪೃಶ್ಯತೆ, ಶೋಷಣೆ, ಜಾತೀಯತೆ, ಇವುಗಳ ಕುರಿತ ಪ್ರತಿಭಟನೆ, ಮತ್ತು ವ್ಯವಸ್ಥೆಯ ವಿರುದ್ಧ ಸಿಡಿದೇಳುವುದೇ ಮೊದಲಾದ ಪ್ರವೃತ್ತಿಗಳು ಕಂಡು ಬಂದುವು. ಸ್ತ್ರೀವಾದಿ ಕವಯಿತ್ರಿಯರಲ್ಲಿ ಪುರುಷನ ದಬ್ಬಾಳಿಕೆ ಶೋಷಣೆಗಳ, ಹಾಗೂ ಪುರುಷ ಪ್ರಧಾನ ಮೌಲ್ಯಗಳ ವಿರುದ್ಧ ಬಂಡೇಳುವ ಪ್ರವೃತ್ತಿ ಕಂಡುಬಂದಿತು.

ಈ ಹಿನ್ನೆಲೆಯಲ್ಲಿ ೨೧ನೇ ಶತಮಾನದಲ್ಲಿ ಈಗಾಗಲೇ ಎರಡು ದಶಕಗಳು ಮುಗಿಯುತ್ತ ಬಂದಿರುವ ಹೊತ್ತಿನಲ್ಲಿ ಈಗಿನ ಕನ್ನಡ ಕಾವ್ಯದ ಪ್ರಮುಖ ಪ್ರವೃತ್ತಿಗಳ ಬಗ್ಗೆ ಚರ್ಚಿಸುವುದು ಹೆಚ್ಚು ಪ್ರಸ್ತುತವೆನಿಸಿದ ಕಾರಣ ಆ ಬಗ್ಗೆ ಉಪನ್ಯಾಸ ನೀಡಲು ಆಹ್ವಾನಿಸಿದ್ದರ ಬಗ್ಗೆ ಹೇಳಿದರು.

ಅನಂತರ ಮಾತನಾಡಿದ ಡಾ॥ ರಾಮಲಿಂಗಪ್ಪನವರು ಈಗ ನವೋದಯ ನವ್ಯ ಎರಡರ ಸೇತುವೆ ಎನಿಸಿದ ಚನ್ನವೀರ ಕಣವಿಯವರಿಂದ ಆರಂಭಿಸಿ ಇಂದಿನ ಯುವ ಕವಿಯವರೆಗೆ ನಾಲ್ಕು ತಲೆಮಾರಿನ ಕವಿಗಳು ಒಟ್ಟಿಗೇ ಬರೆಯುತ್ತಿದ್ದಾರೆ ಎಂದು ಹೇಳಿ ಹಲವಾರು ಕವಿಗಳ ಹೆಸರುಗಳ ಒಂದು ಸುದೀರ್ಘ ಪಟ್ಟಿಯನ್ನೇ ನೀಡಿದರು. ಈ ಕಾಲದ ಒಂದು ವೈಶಿಷ್ಟ್ಯವೆಂದರೆ ಇದುವರೆಗೆ ಜನರ ಗಮನಕ್ಕೆ ಬರದೆ ಇದ್ದ ಜನವರ್ಗಗಳ ಬದುಕು, ಲೋಕದ ಕಣ್ಣಿಗೆ ಬೀಳದಿದ್ದ ಜನರ ನೋವು, ದನಿಗಳು ಕಾವ್ಯದಲ್ಲಿ ಅಭಿವ್ಯಕ್ತಿಯನ್ನು ಪಡದುಕೊಂಡಿವೆ ಎಂದು ಹೇಳಿದರು. ಕವಯಿತ್ರಿಯರು ನಿರ್ಭಿಡೆಯಿಂದ ತಮ್ಮ ಅನುಭವಗಳನ್ನು ಕಾವ್ಯದಲ್ಲಿ ದಾಖಲು ಮಾಡುತ್ತಿದ್ದಾರೆಂದು ಹೇಳಿ ಪ್ರತಿಭಾ ನಂದಕುಮಾರ್ ಅವರ ಕವನದ ಕೆಲವು ಸಾಲುಗಳನ್ನು ಓದಿದರು. ಹಾಗೆಯೇ ಅವರು ಪ್ರಸ್ತಾಪಿಸಿದ ಇನ್ನೊಬ್ಬ ಕವಯಿತ್ರಿಯೆಂದರೆ ವಿನಯಾ ಒಕ್ಕುಂದ ಅವರು. ಎನ್. ಕೆ ಹನುಮಂತಯ್ಯ, ಸುಬ್ಬು ಹೊಲೆಯಾರ್ ಮೊದಲಾದ ಕವಿಗಳ ಕಾವ್ಯದ ರೀತಿ, ಕಾವ್ಯದ ಕಟ್ಟೋಣವನ್ನು ಪ್ರಸ್ತಾಪಿಸಿದರು. ಕಾರ್ಯದರ್ಶಿ ಶ್ರೀಮತಿ ವಿಜಯಾ ಸುಬ್ಬರಾಜ್ ಅವರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

## ೨೦–೦೩–೨೦೧೯ ಸಾಹಿತ್ಯ ಸಂಚಲನ –೯

ಬಿ.ಎಂ.ಶ್ರೀ ಪ್ರತಿಷ್ಠಾನದ ಸಹಯೋಗದಲ್ಲಿ




ಕರ್ನಾಟಕ ಲೇಖಕಿಯರ ಸಂಘದ ಕಾರ್ಯಕ್ರಮ

**ಮುಖ್ಯ ಅತಿಥಿ: ಪ್ರೊ॥ ಗಾಯತ್ರಿ ಮೂರ್ತಿ ವಿಜ್ಞಾನ ಸಾಹಿತಿ**

**ಉಪನ್ಯಾಸದ ವಿಷಯ: ಮಕ್ಕಳ ಸಾಹಿತ್ಯದಲ್ಲಿ ವಿಜ್ಞಾನದ ಮಹತ್ವ**

ಮಕ್ಕಳಿಗೆ ತಮ್ಮ ಸುತ್ತಮುತ್ತ ನಡೆಯುವ ಪ್ರತಿಯೊಂದು ವಿಷಯದಲ್ಲಿ ಕುತೂಹಲ ಇರುತ್ತದೆ.ಅದು ವಿಜ್ಞಾನವೆಂದು ಅವರಿಗೆ ಗೊತ್ತಿರುವುದಿಲ್ಲ. ತಾಯಂದಿರಿಗೆ ಈ ಬಗ್ಗೆ ಪ್ರಶ್ನಿಸಿದಾಗ ನಿಮ್ಮ ಟೀಚರ್ ಹೇಳಿಕೊಡುತ್ತಾರೆ; ನಿಮ್ಮ ಪಾಠದಲ್ಲಿ ಬರುತ್ತದೆ ಎಂದು ಉತ್ತರಿಸಿದರೆ ಅವರ ಕುತೂಹಲ ಬತ್ತಿ ಹೋಗುತ್ತದೆ. ಹಾಗೆಯೇ ವಿಜ್ಞಾನವೂ ಕೂಡ ಅಂತ್ಯ ಕಾಣುತ್ತದೆ. ಅದ್ದರಿಂದ ತಂದೆ–ತಾಯಿಯರು ಸರಳವಾಗಿ ಮಕ್ಕಳಿಗೆ ವಿಜ್ಞಾನದ ವಿಷಯಗಳನ್ನು ತಿಳಿಸಿ ಹೇಳುವಷ್ಟು ಅರಿತಿರಬೇಕು. ಇದಕ್ಕಾಗಿ ಜನಪ್ರಿಯ ವಿಜ್ಞಾನದ ಪುಸ್ತಕಗಳನ್ನು ಓದಬೇಕು ಎಂದು ವಿಜ್ಞಾನ ಸಾಹಿತಿ ಗಾಯತ್ರಿ ಮೂರ್ತಿಯವರು ಕರ್ನಾಟಕ ಲೇಖಕಿಯರ ಸಂಘ ಪ್ರತಿ ತಿಂಗಳ ಮೂರನೆಯ ಬುಧವಾರ ಹಮ್ಮಿಕೊಂಡಿರುವ ಸಾಹಿತ್ಯ ಸಂಚಲನ ಕಾರ್ಯಕ್ರಮದಲ್ಲಿ 'ಮಕ್ಕಳ ಸಾಹಿತ್ಯದಲ್ಲಿ ವಿಜ್ಞಾನದ ಮಹತ್ವ' ಎನ್ನುವ ವಿಷಯದ ಬಗ್ಗೆ ಉಪನ್ಯಾಸ ನೀಡಿದಾಗ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಆರಂಭದಲ್ಲಿ ಗಾಯತ್ರಿ ಮೂರ್ತಿಯವರನ್ನು ಸಹಕಾರ್ಯದರ್ಶಿ ಜಿ.ವಿ.ನಿರ್ಮಲ ಸಭೆಗೆ ಪರಿಚಯಿಸಿದರು.

ಬಹಳ ಹಿಂದೆ ಪ್ರಕೃತಿಯ ಸಹಜ ವಿದ್ಯಮಾನಗಳಾದ ಸೂರ್ಯಚಂದ್ರರ ಚಲನೆ, ಮಳೆ, ಮೋಡ, ಮಿಂಚುಗಳು ಜನರ ಕುತೂಹಲವನ್ನು ಕೆರಳಿಸುತ್ತಿದ್ದವು. ಗ್ರಹಣ, ಧೂಮಕೇತುಗಳು ಜನರಲ್ಲಿ ಭೀತಿ ಹುಟ್ಟಿಸುತ್ತಿದ್ದವು.ಜೊತೆಗೆ ಹಲವಾರು ಮೂಢನಂಬಿಕೆಗಳಿಗೆ ಎಡೆ ಮಾಡಿಕೊಡುತ್ತಿದ್ದವು. ಇವೆಲ್ಲಕ್ಕೂ ಉತ್ತರ ಸಿಕ್ಕಿದ್ದು ವಿಜ್ಞಾನ ಸಂವಹನದಿಂದ. ವಿಜ್ಞಾನ ಸಂವಹನದ ವಿವಿಧ ರೀತಿಗಳಲ್ಲಿ ವಿಜ್ಞಾನ ಸಾಹಿತ್ಯ ಪ್ರಮುಖ ಪಾತ್ರ ವಹಿಸುತ್ತದೆ. ಮಕ್ಕಳಿಗೆ ವಿಜ್ಞಾನ ಅರ್ಥವಾಗುವುದಿಲ್ಲ ಎಂದು ಭಾವಿಸುವುದು ತಪ್ಪು. ಮಕ್ಕಳ ಆಸಕ್ತಿಯನ್ನು ಕೆರಳಿಸುವ, ಕುತೂಹಲವನ್ನು ತಣಿಸುವ, ಅವರ ಬುದ್ಧಿಶಕ್ತಿಯನ್ನು ಬೆಳೆಸುವ ನಿಟ್ಟಿನಲ್ಲಿ, ೫ ರಿಂದ ೮, ೮ ರಿಂದ ೧೨ ಹಾಗೂ ೧೨ ರಿಂದ ೧೫ ವಯಸ್ಸಿನ ಮಕ್ಕಳಿಗಾಗಿ ವಿವಿಧ ಮಟ್ಟದಲ್ಲಿ ವಿಜ್ಞಾನ ಸಾಹಿತ್ಯವನ್ನು ರಚಿಸುವ ಅಗತ್ಯವಿದೆ. ಇಲ್ಲಿ ಭಾಷಾ ಪ್ರೌಢಿಮೆಗೆ ಅವಕಾಶವಿಲ್ಲ. ಸರಳವಾದ ಭಾಷೆ, ನಮ್ಮ ಸುತ್ತಮುತ್ತ ಕಾಣುವ ಸನ್ನಿವೇಶಗಳು ಹಾಗೂ ಮನೆಯಲ್ಲಿಯೇ ಮಾಡಬಹುದಾದ ಪ್ರಯೋಗಗಳನ್ನು ಬಳಸಿಕೊಳ್ಳುವುದು ಅತ್ಯಗತ್ಯ. ವಿಜ್ಞಾನ ಸಾಹಿತ್ಯವನ್ನು ವಿಷಯ ತಜ್ಞರು ಮಾತ್ರವಲ್ಲ; ಭಾಷೆ ಬಲ್ಲವರೆಲ್ಲ ಬರೆಯಬಹುದು. ಆದರೆ ತಮಗೆ ಹೆಚ್ಚು ಪರಿಚಿತವಿಲ್ಲದ ವಿಷಯದ ಬಗ್ಗೆ ಬರೆಯುವಾಗ ವಿಷಯ ತಜ್ಞರ ಜೊತೆ ಚರ್ಚಿಸಿ, ಸರಿಯಾದ ಮಾಹಿತಿಯನ್ನು ನೀಡಬೇಕು.ಸ್ವಾರಸ್ಯಕರವಾದ ವಿಜ್ಞಾನ ಸಾಹಿತ್ಯವನ್ನು ಓದುವರಿಂದ ಮಕ್ಕಳಲ್ಲಿ ಕುತೂಹಲ ಮೂಡುತ್ತದೆ; ಈ ಕೌತುಕ ಜ್ಞಾನದ ಹಸಿವನ್ನು ಹುಟ್ಟಿಸುತ್ತದೆ. ಹಸಿವಿದ್ದ ವ್ಯಕ್ತಿ ಊಟ ಮಾಡುವುದರಿಂದ ಅವನಲ್ಲಿ ಶಕ್ತಿಯಾಗಿ ಮಾರ್ಪಡುತ್ತದೆ. ಮಕ್ಕಳಲ್ಲಿ ವಿಜ್ಞಾನದ ಬಗ್ಗೆ ಆಸಕ್ತಿಯನ್ನು ಕೆರಳಿಸಿ, ಉಳಿಸಿ, ಬೆಳಸಬೇಕು ಎಂದರು.

ಕನ್ನಡದ ಶ್ರೇಷ್ಠ ಬರಹಗಾರರಲ್ಲೊಬ್ಬರಾದ ಡಾ..ಶಿವರಾಮ ಕಾರಂತರು ಮಕ್ಕಳ ವಿಜ್ಞಾನ ಸಾಹಿತ್ಯಕ್ಕೆ ಬಹಳ ಕೊಡುಗೆ ನೀಡಿದ್ದಾರೆ.ಮಕ್ಕಳಿಗಾಗಿ ವಿಜ್ಞಾನ ಸಾಹಿತ್ಯ ರಚಿಸುವ ಸಾಹಿತಿ ಆ ಮಟ್ಟಕ್ಕೆ ಏರಿ ಸಾಹಿತ್ಯ ರಚನೆ ಮಾಡಬೇಕಾಗುತ್ತದೆ.ಪದಗಳು, ವಾಕ್ಯಗಳು ಮತ್ತು ಪ್ಯಾರಾಗಳು ಚಿಕ್ಕದಾಗಿರಬೇಕು ಎಂದು ಹೇಳಿ, ತಾವು ಬರೆದಿರುವ ಗಾಳಿ, ಶಾಖ, ನೀರು, ಬೆಳಕು, ಹಾಗೂ ಶಬ್ದಲೋಕ ಪುಸ್ತಕಗಳು ನವಕರ್ನಾಟಕ ಪಬ್ಲಿಕೇಷನ್‌ರವರು ಪ್ರಕಟಿಸಿದ್ದು ಸುಮಾರು ಹದಿನೈದು ಆವೃತ್ತಿಗಳನ್ನು ಕಂಡಿವೆ ಎಂದು ತಿಳಿಸಿದರು.ಅಲ್ಲಿ ನೆರೆದಿದ್ದ ಲೇಖಕಿಯರಿಗೆ ಮಕ್ಕಳಿಗಾಗಿ ವಿಜ್ಞಾನ ಸಾಹಿತ್ಯವನ್ನು ರಚಿಸುವಂತೆ ಕಳಕಳಿಯಿಂದ ವಿನಂತಿಸಿಕೊಂಡರು. ಉಪನ್ಯಾಸವೆಂದರೆ ತಲೆಚಿಟ್ಟು ಎನ್ನುವವರಿಗೂ ಬೇಸರವಾಗದಂತೆ ಒಂದು ಗಂಟೆಗೂ ಹೆಚ್ಚು ಕಾಲ ಸಮಯ ಕಳೆದದ್ದು ಗೊತ್ತಾಗದಂತೆ ಜನರನ್ನು ಹಿಡಿದಿಟ್ಟು ಚಮತ್ಕಾರ ಮಾಡಿದರು. ಗಾಯತ್ರಿ ಮೂರ್ತಿಯವರನ್ನು ಸಹಕಾರ್ಯದರ್ಶಿ ಜಿ.ವಿ.ನಿರ್ಮಲ ಸಭೆಗೆ ಪರಿಚಯಿಸಿದರು.

ಬಿಎಂಶ್ರೀ ಪ್ರತಿಷ್ಠಾನದ ಕಾರ್ಯದರ್ಶಿ ಡಾ.ವಿಜಯಾ ಸುಬ್ಬರಾಜ್ ಅವರು ಸಭೆಯಲ್ಲಿ ಉಪಸ್ಥಿತರಿದ್ದು, ಜಿಜ್ಞಾಸೆಯೇ ವಿಜ್ಞಾನದ ಮೂಲ; ವಿಜ್ಞಾನದ ಮನೋಜಗತ್ತು ಮತ್ತು ಭೌತಜಗತ್ತುಗಳನ್ನು ಕಲೆಯ ಹಿನ್ನೆಲೆಯಲ್ಲಿ ನೋಡಿದಾಗ ಅನೇಕ ಕೌತುಕಗಳು ಕಾಣುತ್ತವೆ ಎಂದರು. ಜೀವವಿಜ್ಞಾನದ ವಿದ್ಯಾರ್ಥಿನಿಯಾದ ಅವರು ತಮಗೆ ಅವಕಾಶ ನೀಡಿದರೆ ಮೂರು ಗಂಟೆಗಳ ಕಾಲ ಈ ಬಗ್ಗೆ ಉಪನ್ಯಾಸ ನೀಡಲು ಸಿದ್ಧ ಎಂದು ಹೇಳಿದರು.

ಅನಂತರ ನಡೆದ ಕವಿಗೋಷ್ಠಿಯಲ್ಲಿ ಡಿ.ಎನ್.ಗೀತ, ಸತ್ಯಶ್ರೀ ಬಿ.ಜೆ. ಜೆ, ಮಾಧುರಿ ಕೃಷ್ಣ, ವಿಶಾಲ ಆರಾಧ್ಯ, ಕ್ಷಮಾ ಶಿವಕುಮಾರ್, ಪ್ರಮಿಳಾ ಫಾಲನೇತ್ರ, ಪದ್ಮಾವತಿ ಚಂದ್ರು, ಭಾಗ್ಯಲಕ್ಷ್ಮಿ ಮಗ್ಗೆ, ಕುಶಲ ಸ್ವಾಮಿ, ರೇಣುಕಾ ದೇಶಾಯಿ ಮತ್ತು ನಾಗರತ್ನ ಚಂದ್ರಶೇಖರ್ ಕವನ ವಾಚಿಸಿದರು. ಕವಯತ್ರಿಯರು ಸಮಾಜದ ಅಂಕುಡೊಂಕುಗಳು, ವಿಷಾದ, ದುಃಖ, ಬಾಂಧವ್ಯ ಹಾಗೂ ಬೆಂಗಳೂರಿನ ಕೆರೆ ಇತ್ಯಾದಿ ಅನೇಕ ವಿಷಯಗಳನ್ನು ಕುರಿತ ಕವನಗಳನ್ನು ಹಾಗೂ ಚುಟುಕಗಳನ್ನು ವಾಚಿಸಿದರು.ಗೋಷ್ಠಿಯ ಅಧ್ಯಕ್ಷತೆ ವಹಿಸಿದ್ದ ಬಿಷಪ್ ಕಾಟನ್ ಶಾಲೆಯ ನಿವೃತ್ತ ಅಧ್ಯಾಪಕಿ, ಕವಯತ್ರಿ, ಸಾಹಿತಿ, ಗಮಕಿ, ಚುಟುಕು ಸಾಹಿತಿ ಹಾಗೂ ಮುಂಡಿಗೆಯ ರತ್ನ ಎಂದೇ ಪ್ರಖ್ಯಾತಿ ಪಡೆದಿರುವ ಬಹುಮುಖ ಪ್ರತಿಭೆಯ ರತ್ನಾ ಮೂರ್ತಿಯವರು ಪ್ರತಿಯೊಂದು ಕವಿತೆಯ ಬಗ್ಗೆ ತಮ್ಮ ಅಭಿಪ್ರಾಯ ತಿಳಿಸಿ ಕವಯತ್ರಿಯರಿಗೆ ಪ್ರೋತ್ಸಾಹ ನೀಡಿದರು.ತಾವು ರಚಿಸಿದ 'ಭಾರತ ಮಾತೆಯ ಸೇವೆಗೆ' ಕವನದಲ್ಲಿ ತಮ್ಮ ಗಂಡ ಹಾಗೂ ಮೂರು ಜನ ಗಂಡು ಮಕ್ಕಳನ್ನು ಸೈನ್ಯಕ್ಕೆ ಕಳಿಸಿ, ಅವರೆಲ್ಲರೂ ಒಬ್ಬೊಬ್ಬರಾಗಿ ಹುತಾತ್ಮರಾದಾಗ ಆ ಹೆಣ್ಣು ಮಗಳು

ಅನುಭವಿಸಿದ ತುಮುಲ, ದುಃಖ, ದುಮ್ಮಾನಗಳನ್ನು ಮನೋಜ್ಞವಾಗಿ ಕಟ್ಟಿ-ಕೊಟ್ಟರು.

ಸಭೆಯ ಅಧ್ಯಕ್ಷತೆ ವಹಿಸಿದ್ದ ಕರ್ನಾಟಕ ಲೇಖಕಿಯರ ಸಂಘದ ಅಧ್ಯಕ್ಷರಾದ ವನಮಾಲಾ ಸಂಪನ್ನಕುಮಾರರವರು ಎರಡು ಕಾರ್ಯಕ್ರಮಗಳು ಲವಲವಿಕೆಯಿಂದ ಕೂಡಿದ್ದು, ಅರ್ಥಪೂರ್ಣವಾಗಿ, ಸುಂದರವಾಗಿ ಮೂಡಿದವು ಎಂದು ತಮ್ಮ ಸಂತಸ ವ್ಯಕ್ತಪಡಿಸಿದರು.ಬಹಳ ದಿನಗಳಿಂದ ಕವಿಗೋಷ್ಠಿ ಏರ್ಪಡಿಸಬೇಕೆಂದಿದ್ದ ಆಶಯ ಇಂದು ಪೂರ್ಣವಾಯಿತು.ಲೇಖಕಿಯರ ಸಂಘ ಎಲ್ಲಾ ಪ್ರತಿಭೆಗಳಿಗೆ ಅವಕಾಶ ಕಲ್ಪಿಸುವ ಕೆಲಸವನ್ನು ಶ್ರದ್ಧೆಯಿಂದ ಮಾಡುತ್ತಿದೆ ಎಂದು ನುಡಿದು, ಮುಂದಿನ ದಿನಗಳಲ್ಲಿ ಮತ್ತಷ್ಟು ಪ್ರತಿಭೆಗಳಿಗೆ ಅವಕಾಶ ನೀಡುವುದಾಗಿ ಭರವಸೆ ಇತ್ತರು.ಕಾರ್ಯಕ್ರಮದ ನಿರೂಪಣೆಯನ್ನು ಮಾಡಿದ ನಾಗರತ್ನ ಚಂದ್ರಶೇಖರ್‌ರವರು ಸಭೆಗೆ ರತ್ನಾ ಮೂರ್ತಿಯವರನ್ನು ಪರಿಚಯಿಸಿದರು.

## ೨೧-೦೩-೨೦೧೯

## ಕಣಕಟ್ಟೆ ಕೃಷ್ಣಮೂರ್ತಿರಾವ್ ದತ್ತಿ

**ಶಾಸ್ತ್ರೀಯ ಸಂಗೀತ ಕಾರ್ಯಕ್ರಮ**

**ಸಂಗೀತ : ವಿದುಷಿ ಗಿರಿಜಾ ಶಾಸ್ತ್ರೀ, ಹಿಂದೂಸ್ತಾನಿ ಗಾಯಕರು.**



ಶ್ರೀ ಕಣಕಟ್ಟೆ ಕೃಷ್ಣಮೂರ್ತಿರಾವ್ ದತ್ತಿ ಕಾರ್ಯಕ್ರಮಗಳು ಪ್ರತಿಷ್ಠಾನದಲ್ಲಿ ೨೦೧೧ರಿಂದಲೂ ನಡೆದುಕೊಂಡು ಬರುತ್ತಿದೆ.ದತ್ತಿದಾನಿಗಳು ಡಾ.ಕೆ. ಶ್ರೀಕಂಠಯ್ಯ, ಪ್ರಸಿದ್ಧಸಾಹಿತಿಗಳೂ ಹಾಗೂ ಸಂಗೀತ ವಿಮರ್ಶಕು. ಎಂ.ವಿ.ಸೀ ಅವರೊಂದಿಗೆ ನಿಕಟ ಸ್ನೇಹವನ್ನು ಹೊಂದಿದ್ದವರು.ಸಂಗೀತ ಕಾರ್ಯಕ್ರಮಗಳನ್ನು ಆಯೋಜಿಸುವ ಸದುದ್ದೇಶದಿಂದ ದತ್ತಿನಿಧಿಯನ್ನು ಸ್ಥಾಪಿಸಿದ್ದಾರೆ.ದತ್ತಿದಾನಿಗಳ ಪರಿಚಯದ ನಂತರ, ಅಧ್ಯಕ್ಷರಾದ ಡಾ.ಆರ್. ಲಕ್ಷ್ಮೀನಾರಾಯಣ ಅವರು, ಹಿಂದೂಸ್ಥಾನಿ ಗಾಯಕರಾದ ವಿದುಷಿ ಗಿರಿಜಾಶಾಸ್ತ್ರೀಯವರನ್ನು ಸಭೆಗೆ ಪರಿಚಯಿಸಿ, ಸಂಗೀತ ಪ್ರೇಮಿಗಳನ್ನೂ ಮತ್ತು ಕಲಾವಿದರೆಲ್ಲರಿಗೂ ಸ್ವಾಗತಕೋರಿದರು.

ನಂತರ ಅಂದಾಜು ಎರಡು ಘಂಟೆಗಳ ಕಾಲವನ್ನು ಸಂಗೀತ ಕಚೇರಿಗೆ ಮೀಸಲಿಡಲಾಯಿತು. ಅವರು ಹಾಡಿದ ಹಾಡುಗಳು ಹಿಂದೂಸ್ಥಾನಿ-ಶಾಸ್ತ್ರೀಯಗಾಯನದೊಂದಿಗೆ ಪ್ರಾರಂಭಿಸಿ ಅದ್ಭುತವಾದ ರೀತಿಯಲ್ಲಿ ಆಲಾಪ್ ಸ್ವರ ಸಂಗತಿ ಮತ್ತು ತಾನ್‌ಗಳೊಂದಿಗೆ, ಸುಮಾರು ೨೫ನಿಮಿಷಗಳ ಕಾಲಾವಧಿಯಲ್ಲಿ ಪ್ರಸ್ತುತ ಪಡಿಸಿದರು. ನಂತರ ದರ್ಬಾರಿ ಕಾನಡರಾಗದಲ್ಲಿ ನಮೋ ಗಿರಿಜಾನಂದನ, ಶಿವರಂಜನಿ ರಾಗದಲ್ಲಿ ಮನವ ಶೋಧಿಸಬೇಕು.ನಿತ್ಯ ಎಂಬ ಪುರಂದರದಾಸರ ದೇವರನಾಮ, ಇದರೊಂದಿಗೆ ಮತ್ತೊಂದು ಪುರಂದರ ದಾಸರ ಕೀರ್ತನೆ "ಕೃಷ್ಣ ಬಾರೋ, ಪುರಂದರ ವಿಠ್ಠಲ, ಮಧುಕೌಂಸ್ ರಾಗದಲ್ಲಿ ಸುಶ್ರಾವ್ಯವಾಗಿ ಹಾಡಿದರು.ನಂತರ ತಮ್ಮ ಗುರುಗಳಾದ ಪಂ. ಶೇಷಾದ್ರಿ ಗವಾಯಿಗಳ ರಚನೆಯಾದ "ಇದ್ದ ಮಾತು ಇದ್ದಂತೆ ನುಡಿಯೋ" ಎಂಬ ಕೀರ್ತನೆಯನ್ನು ಆಹಿರ್ ಬೈರವ್, ವರಕವಲೇಶ ಕವಿಯ "ತುಂಗಾತೀರ ವಿರಾಜಂ" ಕೀರ್ತನೆಯನ್ನು, ಕನಕದಾಸರ ರಚನೆಯಾದ "ಭಂಟನಾಗಿ ಬಾಗಿಲ ಕಾಯುವೆ" ಎನ್ನುವುದನ್ನು ಬಿಹಾಗ್ ರಾಗದಲ್ಲೂ ಒಟ್ಟು ಹತ್ತು ಕೃತಿಗಳನ್ನು ಹಿಂದೂಸ್ಥಾನಿ ಮತ್ತು ಕರ್ನಾಟಕ ಶೈಲಿಯಲ್ಲಿ ವಿದ್ವತ್ ಪೂರ್ಣವಾಗಿ ಹಾಡಿ ನೆರೆದಿದ್ದ ಸಂಗೀತ ಪ್ರಿಯರನ್ನು ರಂಜಿಸಿದರು.

ಶ್ರೀಮತಿ ಗಿರಿಜಾ ಶಾಸ್ತ್ರೀಯವರ ಸಂಗೀತಕ್ಕೆ ಕಛೇರಿಗೆ ಕಳೆ ಮತ್ತು ಮೆರಗು ಕೊಟ್ಟ ಸಹ ಕಲಾವಿದರು

೧. ತಬಲಾದಲ್ಲಿ ಶ್ರೀ ಶಶಿಭೂಷಣ ಗುರ್ಜರ್ ಖ್ಯಾತ ದೂರದರ್ಶನ ಮತ್ತು ಆಕಾಶವಾಣಿ ಕಲಾವಿದರು.

೨. ಹಾರ್ಮೋನಿಯಂನಲ್ಲಿ ಶ್ರೀನರಸಿಂಹ ಕುಲಕರ್ಣಿ ನಾಡಿನ ಹಿರಿಯ ಮತ್ತು ಕಿರಿಯ ಸಂಗೀತ ಕಲಾವಿದರಿಗೆ ಸಾಥ್ ನೀಡುತ್ತಿರುವ ಕಲಾವಿದರು.

೩. ತಬಲಾದಲ್ಲಿ ಶ್ರೀಪವನ್ ರಾವ್ ವೃತ್ತಿಯಲ್ಲಿ ಇಂಜನಿಯರ್ ಮತ್ತು ಪ್ರವೃತ್ತಿಯಲ್ಲಿ ತಬಲಾವಾದಕರು.

ಡಾ|| ವಿಜಯಾಸುಬ್ಬರಾಜ್ ಅವರ ವಂದನಾರ್ಪಣೆಯೊಂದಿಗೆ ಸಂಗೀತ ಕಾರ್ಯಕ್ರಮ ಮುಕ್ತಾಯವಾಯಿತು.

## ಎಂವಿಸೀ - ಬದುಕು - ಒಂದು ನೋಟ - ೫

**- ಡಾ| ಪಿ. ವಿ. ನಾರಾಯಣ**

ಎಂ. ವಿ. ಸೀತಾರಾಮಯ್ಯನವರೂ ಇತರರಂತೆ ಸಾಹಿತ್ಯ ರಚನೆಗೆ ಕೈಹಾಕಿದ್ದು ಈ ಹಿರಿಯರ ಪ್ರೇರಣೆ ಆದರ್ಶಗಳಿಂದಾಗಿಯೇ. ಕಾಲೇಜಿನಲ್ಲಿ ಓದುತ್ತಿದ್ದಾಗಲೇ ೧೯೩೦ ರಲ್ಲಿ 'ಬೀದಿಯೊಳಗಲೆಯುತಿಹಳಾರಿವಳು ಚೆಲುವೆ' ಎಂಬ ಕವನವನ್ನು ಬರೆದು ತೀನಂಶ್ರೀ ಅದನ್ನು ತಿದ್ದಿದ್ದನ್ನೂ, ಆ ಮುಂದೆ ಅವರು ಸರಳ ರಗಳೆಯ ನೀಳ್ಗವನವೊಂದನ್ನು ಬರೆದು ಬಿಎಂಶ್ರೀ ಸ್ವರ್ಣಪದಕವನ್ನು ಪಡೆದುದನ್ನು ಹಿಂದೆಯೇ ನೋಡಿದ್ದೇವೆ. ಆದರೆ ಅವರ ಮೊದಲ ಪುಸ್ತಕಗಳೆರಡು - 'ಶಿಲಾಮುಖ' ಮತ್ತು 'ಯೌವನಸುಧೆ' - ಬೆಳಕು ಕಂಡದ್ದು ೧೯೩೬ ರಲ್ಲಿ. ೧೯೪೬ ರಲ್ಲಿ 'ಹಕ್ಕಿ ಹಾಡು' ಕವನ ಸಂಕಲನಕ್ಕೆ ದೇವರಾಜ ಬಹದ್ದೂರ್ ಬಹುಮಾನ ಹಾಗೂ ಕನ್ನಡ ಸಾಹಿತ್ಯ ಪರಿಷತ್ತಿನ ಬಹುಮಾನಗಳು ದೊರೆತವು.೧೯೫೧ ರಲ್ಲಿ ಅವರು ತಾವೇ 'ರಾಘವ ಪ್ರಕಾಶನ' ವನ್ನು ಆರಂಭಿಸಿದರು.ಅದರ ಮೂಲಕ ಪ್ರಕಟಗೊಂಡ 'ಮಾದನ ಮಗಳು' ಕಾದಂಬರಿ ಹಾಗೂ ೧೯೫೭ ರಲ್ಲಿ ಪ್ರಕಟಗೊಂಡ 'ಮುಗಿಯದ ಮಾಯೆ' ಕವನ ಸಂಕಲವೂ ದೇವರಾಜ ಬಹದ್ದೂರ್ ಬಹುಮಾನವನ್ನು ಪಡೆದವು. ಮುಂದೆ 'ತೊಟ್ಟಿಲು ತೂಗದ ಕೈ' ನಾಟಕ ಮತ್ತು 'ಜೀವನ ನಾಟಕ' ಕಾದಂಬರಿ - ಎರಡಕ್ಕೂ ಕ್ರಮವಾಗಿ ೧೬೫೭ ಮತ್ತು ೧೯೬೦ ರಲ್ಲಿ ರಾಜ್ಯಸರ್ಕಾರದ ಪುರಸ್ಕಾರವು ದೊರಕಿತು.೧೯೬೭ ರಲ್ಲಿ ನಿಡುಮಾಮಿಡಿ ಮಠವು ಅವರಿಗೆ 'ವಿಚಾರ ರತ್ನಾಕರ' ಎಂಬ ಪ್ರಶಸ್ತಿಯಿತ್ತು ಗೌರವಿಸಿತು.ಅವರ 'ಪ್ರಾಚೀನ ಕನ್ನಡ ವ್ಯಾಕರಣಗಳು' ಕೃತಿಗೆ ೧೯೮೦ ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪುರಸ್ಕಾರ ದೊರೆಯಿತು.ಬೆಂಗಳೂರಿನ ಉದಯಭಾನು ಕಲಾಸಂಘವು ೧೯೮೩ ರಲ್ಲಿ 'ಆಸ್ವಾದ' ಎಂಬ ಹೆಸರಿನ ಬೃಹತ್ ಅಭಿನಂದನ ಸಂಪುಟವನ್ನು ಅವರಿಗೆ ಅರ್ಪಿಸಿದೆ.೧೯೮೫ ರಲ್ಲಿ ಸೀತಾರಾಮಯ್ಯನವರಿಗೆ ರಾಜ್ಯಪ್ರಶಸ್ತಿ ದೊರೆಯಿತು.೧೯೯೦ ರಲ್ಲಿ ಅವರ ಎಂಬತ್ತನೇ ಹುಟ್ಟುಹಬ್ಬವನ್ನು ಅಭಿನಂದನ ಸಮಿತಿಯೊಂದು ಉತ್ಸಾಹದಿಂದ ಆಚರಿಸಿ ಅವರನ್ನು ಗೌರವಿಸಿತು.ಇವಲ್ಲದೆ, ಹತ್ತಾರು ಸಂಘ ಸಂಸ್ಥೆಗಳು ಅವರ ಕನ್ನಡ ಸೇವೆಯನ್ನು ಗೌರವಿಸಿ ಸನ್ಮಾನ ಮಾಡಿವೆ.

ಅವರ ಕನ್ನಡ ಸೇವೆ ಕೇವಲ ಸಾಹಿತ್ಯ ರಚನೆಗೆ ಮತ್ತು ವಿದ್ವತ್ ಕಾರ್ಯಕ್ಕೆ ಮಾತ್ರ ಮೀಸಲಾಗಿರದೆ ಚಳವಳಿಯಲ್ಲಿ ಭಾಗಿಯಾಗುವುದರ ಮೂಲಕವೂ ತನ್ನ ಕಾರ್ಯವ್ಯಾಪ್ತಿಯನ್ನು ವಿಸ್ತರಿಸಿಕೊಂಡಿದೆ.ಅವರ ದೇಹ ಕುಗ್ಗಿದ್ದರೂ ಚೈತನ್ಯ ಗಟ್ಟಿಯಾಗಿದ್ದುದರಿಂದ ಯುವಜನತೆಯನ್ನು ಉದ್ದೀಪಿಸುವ ಸಾಮರ್ಥ್ಯ ಅವರ ಬರವಣಿಗೆಗೂ ಇತ್ತು, ಮಾತುಗಳಿಗೂ ಇತ್ತು. **ಮುಂದುವರಿಯುವುದು**




ಬಾಳು೧: ಹಳಗನ್ನಡದಲ್ಲಿ ಬಾಟ್ ಮತ್ತು ಬಾಳ್ ಎಂಬ ಎರಡು ರೂಪಗಳೂ ಬೇರೆ ಬೇರೆ ಅರ್ಥದಲ್ಲಿದ್ದವು. ಈಗ ಇವೆರಡೂ ಒಂದೇ ರೂಪದಲ್ಲಿವೆ: ಅದೇ ಬಾಳು. ಇದರ ಮೂಲ ಸ್ವರೂಪವಾದ ಬಾಟ್ ಎಂಬುದು ತಮಿಳಿನಲ್ಲಿ ವಾಟ್ ಎಂದೂ ಮಲಯಾಳಂನಲ್ಲಿ ವಾಟು ಎಂದೂ ತುಳುವಿನಲ್ಲಿ ಬಾಳು ಎಂದೂ ದೊರಕುತ್ತದೆ.ಬಾಟ್ ಹಳಗನ್ನಡದಲ್ಲಿ ಕ್ರಿಯಾರ್ಥ ಮತ್ತು ನಾಮವಾಚಕಗಳಾಗಿ ಬಳಕೆಯಲ್ಲಿತ್ತು.ಮೊದಲಿಗೆ ಇದರ ಕ್ರಿಯಾರೂಪದನ್ನು ವಿವೇಚಿಸಬಹುದು. ಜೀವಿಸು ಎಂಬುದು ಇದರರ್ಥ. "ಇಂತು ಬಾಟ್ವುದೆ ಚೋದ್ಯಂ" ಎಂಬ ಮಾತು ಕವಿರಾಜಮಾರ್ಗದಲ್ಲಿಯೇ ಇದೆ. "ಜೋಳಕ್ಕೆ ತಪ್ಪಿಯುಂ ಇಂ ಬಾಟ್ವುದೆ, ಪೂಣ್ದು ನಿಲ್ಲದಿಕೆಯಿಂ ಬಾಟ್ವಂತು ವಿಖ್ಯಾತಕೀರ್ತಿಯವೊಲ್ ಈ ಒಡಲ್ ಅಬ್ಬೆ ಪೇಟಿಮೆನಗೇಂ ಕಲ್ಪಾಂತರಸ್ಥಾಯಿಯೇ" ಎಂಬ 'ಪಂಪಭಾರತ'ದ ಪ್ರಖ್ಯಾತ ವಾಕ್ಯದಲ್ಲಿ ಈ ಪದ ಎರಡು ಬಾರಿ ಬಳಕೆಯಾಗಿದೆ.ಕೃದಂತರೂಪದಲ್ಲಿ ಆದಿದೀರ್ಘವು ಹ್ರಸ್ವವಾಗುತ್ತದೆ. "ತನ್ನ ಸಂತತಿಗೆ ಮಕ್ಕಳಿಲ್ಲದಳ್ ಬಟ್ದಿ ಬಾಟ್ವಿಳ್" ಎಂಬಲ್ಲಿ 'ಬಟ್ದಿ' ಎಂದಾಗಿ ಬದುಕಿ ಎಂಬರ್ಥವನ್ನು ಪಡೆ–ಯುತ್ತದೆ. ಬಾಟ್ ಎಂದರೆ ಸುಖವಾಗಿರು ಎಂಬ ಅರ್ಥವೂ ಧ್ವನಿಸುತ್ತದೆ: "ಅರವಿಂದಮಿತ್ರನ ಬಲದಿಂ ಕಾದಿ ಕೊಂದೆವಪ್ಪೊಡೆ ಸುಖದಿಂ ಬಾಟ್ವೆವು" ಎಂಬ 'ಪಂಚತಂತ್ರ'ದ ಮಾತು ಇದಕ್ಕೆ ಉದಾಹರಣೆ. ಹಾಗೆಯೇ ಜೀವನ ಮಾಡು ಎಂಬರ್ಥವೂ ಇದಕ್ಕಿದೆ. "ಜೀವಿತಮಂ ಕೊಂಡು ಬಾಟ್ವನೆಂಬವಂ ಪ್ರಾಣಮಂ ಕುಡಲ್ವೇಟ್ಕುಂ" ಎಂಬ ಅದರದ್ದೇ ಮತ್ತೊಂದು ವಾಕ್ಯದಲ್ಲಿ ಇದು ಸ್ಪಷ್ಟವಾಗುತ್ತದೆ. 'ಶಬ್ದಮಣಿದರ್ಪಣ'ವು "ಬಟ್ದಿಂ (ಬಾಟ್ದಿಂ)=ಜೀವಿಸಿದಂ, ಒಕ್ಕಲಾದಂ" ಎಂಬ ಅರ್ಥವನ್ನು ಕೊಡುತ್ತದೆ. ಮುಂದಿನ ಬರವಣಿಗೆಯಲ್ಲಿ ಟಕಾರ ಳಕಾರವಾಯಿತು; ಜೊತೆಗೆ ವ್ಯಂಜನಾಂತವು ಸ್ವರಾಂತವಾಯಿತು; ಹೀಗಾಗಿ ಇದರ ರೂಪ ಬಾಳು ಎಂದಾಯಿತು. ನಡುಗನ್ನಡ ಕಾವ್ಯಗಳು 'ಬಾಟ್' ಎಂಬ ಶಬ್ದಕ್ಕಿರುವ ಅರ್ಥಗಳಲ್ಲಿ ಈ ರೂಪವನ್ನೇ ಬಳಸುತ್ತವೆ. ಬದುಕಿರುವ ಹೆಣ ಎಂಬರ್ಥದಲ್ಲಿ ಬಸವಣ್ಣ 'ಬಾಳುವೆಣ' ಎಂಬ ರೂಪವನ್ನು ಸೃಷ್ಟಿಸಿಕೊಳ್ಳುತ್ತಾನೆ: "ಬಾಳುವೆಣನ ಬೀಳುವೆಣನ ಸಂಸಾರವೇನವನ?" "ವನಿತೆ ನಿನ್ನಂ ಬಾಳಲೀಯೆವು" ಎಂಬುದು 'ಬಸವಪುರಾಣ'ದ ವಾಕ್ಯ. ಹೊಸಗನ್ನಡದಲ್ಲೂ ಇದೇ ರೂಢಿ ಮುಂದುವರಿಯಿತು. "ತಾಯೆ – ಬಾಳಮ್ಮ, ಬಾಳು" ಎಂಬುದು ಬಿಎಂಶ್ರೀ ಅವರ 'ಕನ್ನಡ ತಾಯ್ ನೋಟ'ದ ಸಾಲು. ಇಲ್ಲಿರುವುದು ಹಾರೈಕೆ. ಹಳಗನ್ನಡದಲ್ಲಿ ಕೃದಂತ ರೂಪದಲ್ಲಿ ಆದಿ ಹ್ರಸ್ವವಾಗದೆ ಹೊಸಗನ್ನಡದಲ್ಲಿ ದೀರ್ಘವೇ ಉಳಿದುಕೊಳ್ಳುತ್ತದೆ: ಅದೇ ಪದ್ಯದ "ಬಾಳ್ವವರು ಮೆರೆವವರು" ಎಂಬ ರೂಪವನ್ನು ನೋಡಬಹುದು.

೨ನೇ ಪುಟದಿಂದ

## ಭಾರತೀಸುತ

ಹೆಸರು: ಶಾನಭಾಗ ರಾಮಯ್ಯ ನಾರಾಯಣರಾವ್

ಕಾವ್ಯನಾಮ; ಭಾರತೀಸುತ

ಹುಟ್ಟಿದ ಸ್ಥಳ- ದಿನಾಂಕ; ಮಡಕೇರಿ ಬಳಿಯ ಬಿಳಿಗೇರಿ, ೧೫-೦೫-೧೯೧೫

ತಂದೆ-ತಾಯಿ; ರಾಮಯ್ಯ, ಸುಬ್ಬಮ್ಮ

ಶಿಕ್ಷಣ; ಮದರಾಸು ವಿಶ್ವವಿದ್ಯಾಲಯದಿಂದ ಕನ್ನಡ ವಿದ್ವಾನ್ ಪದವಿ,ಶಿಕ್ಷಕ ತರಬೇತಿ

ವೃತ್ತಿ; ಕಥೆಗಾರರು. ಶಿಕ್ಷಕರು, ಮತ್ತು ಪತ್ರಕರ್ತರು. ಮಡಕೇರಿಯಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸಿರುತ್ತಾರೆ. ರಾಷ್ಟ್ರ ಬಂಧು ಪತ್ರಿಕೆಯಲ್ಲಿ ಕೆಲಕಾಲ ಕೆಲಸ ಮಾಡಿದರು. ತಮ್ಮ ೧೫ ನೇ ವಯಸ್ಸಿನಲ್ಲಿ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿ ಜೈಲು ಸೇರಿದರು.

ಸಾಹಿತ್ಯಸಾಧನೆಗಳು; ೩೨ ಕಾದಂಬರಿ, ೮ ಕಥಾಸಂಕಲನ, ೧೯ಮಕ್ಕಳ ಕಥೆ ಪುಸ್ತಕಗಳು ಹಾಗೂ ನವಸಾಕ್ಷರರಿಗಾಗಿ ೩ ಕೃತಿಗಳನ್ನು ಬರೆದಿರುತ್ತಾರೆ. ಇವರ ಎಡಕಲ್ಲು ಗುಡ್ಡದ ಮೇಲೆ, ಬಯಲು ದಾರಿ, ಮತ್ತು ಹುಲಿಯ ಹಾಲಿನ ಮೇವು ಕಾದಂಬರಿಗಳು ಚಲನಚಿತ್ರವಾಗಿವೆ.

ಪ್ರಶಸ್ತಿ-ಗೌರವಗಳು; ಕರ್ನಾಟಕ ಸಾಹಿತ್ಯ ಅಕಾಡಮಿ ಪ್ರಶಸ್ತಿ ( ಮರಣೋತ್ತರ) ೧೯೭೬ರಲ್ಲಿ. ಭಾರತೀಸುತರ ಗೆಳೆಯರು ಅವರ ಗೌರವಾರ್ಥವಾಗಿ ಬ್ರಹ್ಮಗಿರಿ ಎಂಬ ಸಂಸ್ಮರಣ ಗ್ರಂಥವನ್ನು ಹೊರತಂದರು

ನಿಧನ; ೦೪-೦೪-೧೯೭೬ ರಂದು ಈ ಲೋಕವನ್ನಗಲಿದರು.

## ಶಂಕರ ಮೊಕಾಶಿ ಪುಣೇಕರ

ಹೆಸರು: ಶಂಕರ ಮೊಕಾಶಿ ಪುಣೇಕರ

ಕಾವ್ಯನಾಮ; ಇಲ್ಲ

ಹುಟ್ಟಿದ ಸ್ಥಳ- ದಿನಾಂಕ; ಧಾರವಾಡ, ೦೮-೦೫-೧೯೨೮

ತಂದೆ-ತಾಯಿ; ರಾವಜಿರಾವ್, ಸುಂದರ ಬಾಯಿ

ಶಿಕ್ಷಣ; ಕರ್ನಾಟಕ ವಿಶ್ವವಿದ್ಯಾಲಯದಿಂದ ಎಂ. ಎ. ಇಂಗ್ಲೀಷ್ ಮತ್ತು ಪಿ.ಎಚ್.ಡಿ ಪದವಿಯನ್ನು ಗಳಿಸಿಕೊಂಡರು. ಕನ್ನಡ, ಇಂಗ್ಲೀಷ್, ಸಂಸ್ಕೃತ ಬಾಷೆಗಳಲ್ಲಿ ಪಾಂಡಿತ್ಯ ಹೊಂದಿದ್ದರು. ಸಂಗೀತ ಕ್ಷೇತ್ರದಲ್ಲಿ ತಮ್ಮದೇ ಆದ ಹೊಸ ರಾಗಗಳನ್ನು ಸೃಷ್ಟಿಸಿ, 'ಸೈ',ಎನಿಸಿಕೊಂಡವರು.

ವೃತ್ತಿ; ಶಂಕರ ಮೊಕಾಶಿ ಪುಣೇಕರರು, ಬಿಜಾಪುರ, ಕಾರವಾರ, ಧಾರವಾಡಗಳಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸಿದರು. ಮುಂದೆ ಮುಂಬೈನ ಐಐಟಿಯಲ್ಲಿ ಉಪನ್ಯಾಸಕರಾಗಿ, ಉಡುಪಿಯ ಪೂರ್ಣಪ್ರಜ್ಞ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿಯೂ ನಂತರ ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಇಂಗ್ಲೀಷ್ ಪ್ರವಾಚಕರಾಗಿ ಕೆಲಸ ಮಾಡಿದರು. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಇಂಗ್ಲೀಷ್ ಪ್ರಾಧ್ಯಾಪಕರಾಗಿ ಸೇವೆಗೈದು ನಿವೃತ್ತರಾದರು.

ಸಾಹಿತ್ಯಸಾಧನೆಗಳು; ಕನ್ನಡ ಮತ್ತು ಇಂಗ್ಲೀಷ್ ಎರಡು ಭಾಷೆಗಳಲ್ಲಿ ಡಾ.ಮೊಕಾಶಿಯವರು ೩೫ಕ್ಕೂ ಹೆಚ್ಚು ಪುಸ್ತಕಗಳನ್ನು ಬರೆದಿದ್ದಾರೆ. ಅವರ ಕಾದಂಬರಿಗಳಲ್ಲಿ ಗಂಗವ್ವ ಗಂಗಾಮಾಯಿ, ನಟ ನಾರಾಯಣಿ, ಸುಧಾ, ಅವಧೇಶ್ವರಿ ಪ್ರಮುಖವಾದವು, ಆವರು ಕಾದಂಬರಿ, ವಿಮರ್ಶೆ, ಸಂಶೋಧನೆ, ನಾಟಕ ಹೀಗೆ ಹಲವಾರು ಪ್ರಕಾರಗಳಲ್ಲಿ ಕೃತಿಗಳನ್ನು ರಚಿಸಿದ್ದಾರೆ. ಅವರ ಇಂಗ್ಲೀಷ್ ಕಾವ್ಯಗಳು, ದಿ ಕ್ಯಾಪ್ಟಿವ್, ದಿ ಪ್ರಿಟೆಂಡರ್ ಮುಂತಾದವುಗಳು.

ಪ್ರಶಸ್ತಿ-ಗೌರವಗಳು; ೧೯೮೮ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ , ಕೇಂದ್ರ ಮತ್ತು ರಾಜ್ಯ ಸಾಹಿತ್ಯ ಅಕಾಡೆಮಿ ಹಾಗೂ ಭಾರತೀಯ ಜ್ಞಾನಪೀಠ ಕನ್ನಡ ಸಲಹಾ ಸಮಿತಿಯ ಸದಸ್ಯರಾಗಿ ಸೇವೆ ಸಲ್ಲಿಸುವ ಗೌರವಕ್ಕೆ ಪಾತ್ರರಾಗಿದ್ದರು. ೧೯೮೪ರಲ್ಲಿ ನಡೆದ ವಿಶ್ವ ಕಾವ್ಯ ಸಮ್ಮೇಳನದಲ್ಲಿ ಭಾರತದ ಪ್ರತಿನಿಧಿ ಆಗಿದ್ದರು. ಟೈಮ್ಸ್ ಆಫ್ ಇಂಡಿಯ ಪತ್ರಿಕೆಗೆ ಸಂಗೀತ ವಿಮರ್ಶಕರಾಗಿ ಹಲವಾರು ವರ್ಷಗಳ ಕಾಲ ದುಡಿದಿದ್ದಾರೆ.

ನಿಧನ; ಆಗಸ್ಟ್ ೧೧ ೨೦೦೪ ರಂದು ನಿಧನರಾದರು.

### ಮೇತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಕಡೆಂಗೊಡ್ಲುಶಂಕರ ಭಟ್ಟ | ೧೬-೫-೧೯೬೮ |
| ಡಿಎಲ್ ನರಸಿಂಹಚಾರ್ಯ | ೮-೫-೧೯೭೧ |

## ಚುಟುಕು ಚಿನಕುಗಳು

ಕವಿಯತ್ರಿ : ಶ್ರೀಮತಿ ಗೀತಾ ಶೇಷಾದ್ರಿ

ಪುಟ– ೫೦, ಬೆಲೆ – ರೂ. ೫೦/–, ಪ್ರಥಮ ಮುದ್ರಣ–೨೦೧೮

ಇತ್ತೀಚಿನ ದಿನಗಳಲ್ಲಿ ಚುಟುಕುಗಳು ಹೆಚ್ಚು ಜನಪ್ರಿಯತೆಯನ್ನು ಪಡೆಯುತ್ತಿರುವ ಒಂದು ಪ್ರಕಾರವಗಿದೆ.ಚುಟುಕು ಕವನಗಳು ಸಾಹಿತ್ಯ ಕ್ಷೇತ್ರದಲ್ಲಿ ತಮ್ಮದೇ ಆದ ಸಂಚಲನವನ್ನು ಮೂಡಿಸುತ್ತಿವೆ. ಈ ಪ್ರಕಾರ ಹೆಚ್ಚು ಜನಪ್ರಿಯವಾಗಲು ಒಂದು ಮುಖ್ಯ ಕಾರಣವೇ ಜನ ಸಾಮಾನ್ಯರಿಗೆ ಅರ್ಥವಾಗದ ಜೀವನ ಧರ್ಮದ ಮರ್ಮವನ್ನು ತಿಳಿಸುವುದು.

ಶ್ರೀಮತಿ ಗೀತಾ ಶೇಷಾದ್ರಿ ಅವರ ಚುಟುಕು ಚಿನಕುಗಳು ಎಂಬ ಪುಸ್ತಕದಲ್ಲಿ ಆಧ್ಯಾತ್ಮಿಕ, ತಾತ್ವಿಕ, ಸಾಮಾಜಿಕ, ಗಣಕಯಂತ್ರ ಹಾಗೂ ಪ್ರಾಕೃತಿಕ ಎಂಬ ಶೀರ್ಷಿಕೆಯಲ್ಲಿ ೧೫೦ಚುಟುಕುಗಳನ್ನು ರಚಿಸಿದ್ದಾರೆ.ಇವುಗಳಲ್ಲಿ ಜೀವನದ ಆಗು ಹೋಗುಗಳನ್ನು ಸರಳವಾಗಿ, ನೇರವಾಗಿ, ಸಂಕ್ಷಿಪ್ತವಾಗಿ ನಮ್ಮ ಮುಂದಿಡುವ ಪ್ರಯತ್ನ ಮಾಡಿದ್ದಾರೆ.ಕೆಲವು ಆಯ್ದ ಚುಟುಕಗಳನ್ನು ಇಲ್ಲಿ ಗಮನಿಸೋಣ.

ಕಾಲ ಚಕ್ರ ಉರುಳಿ ಹೋದುದು ತಿಳಿಯಲಿಲ್ಲ
ಒಳಿತು ಕೆಡುಕಿನ ಮಿಡಿತಗಳ ಅರಿವು ಆಗಲಿಲ್ಲ
ಬದುಕೆಲ್ಲಾ ಬವಣೆಗಳಿಂದಲೇ ಕಳೆಯಿತಲ್ಲ
ವ್ಯರ್ಥವಾಗಿ ಕಳೆದ ಕಾಲ ಮರಳಿ ಬಾರದಲ್ಲ.
–ತಾತ್ವಿಕ (೩೬)ಜೀವನ ಚಕ್ರ.

ಇಲ್ಲಿ ಸಮಯದ ಮಹತ್ವವನ್ನು ಅರ್ಥಪೂರ್ಣವಾಗಿ ತಾತ್ವಿಕ ಹಿನ್ನೆಲೆಯಲ್ಲಿ ವಿವರಿಸಿದ್ದಾರೆ.ವ್ಯರ್ಥವಾಗಿ ಕಳೆದ ಸುಮಾರು ಮತ್ತೆ ಬಾರದು ಎಂಬ ವಿಚಾರದೊಂದಿಗೆ ಜೀವನ ಚಕ್ರ ಉರುಳಿದೆ ಎಂದು ಹೇಳುತ್ತಾರೆ.

– ಸುಧಾ.ಬಿ.ಆರ್.
ಸಂಶೋಧನಾ ವಿದ್ಯಾರ್ಥಿನಿ

**ಪುನರುದೀಪ್ತ :** ಉಜ್ವಲ ಭವಿಷ್ಯಕ್ಕಾಗಿ ವೈಜ್ಞಾನಿಕ ಮಾರ್ಗಗಳು

ಮೂಲ: ಇಂಗ್ಲೀಷ್

ಮೂಲ ಲೇಖಕರು: ಡಾ. ಎ.ಪಿ.ಜೆಅಬ್ದುಲ್ ಕಲಾಂ ಹಾಗೂ ಸೃಜನ್ ಪಾಲ್ ಸಿಂಗ್

ಕನ್ನಡಕ್ಕೆ: ಗಾಯತ್ರಿ ಮೂರ್ತಿ

ಪ್ರಕಾಶಕರು: ಪ್ರಿಸಮ್ ಬುಕ್ಸ ಪ್ರೈ. ಲಿ.

ಮೊದಲ ಮುದ್ರಣ : ೨೦೧೯

ಪುಟಗಳು: ೨೫೨

ಬೆಲೆ: ರೂ. ೨೯೯/–

ಡಾ. ಎ.ಪಿ.ಜೆಅಬ್ದುಲ್ ಕಲಾಂ ಹಾಗೂ ಸೃಜನ್ ಪಾಲ್ ಸಿಂಗ್ ಅವರ"ರಿಇಗ್ನೈಟ್"(Reignite) ಪುಸ್ತಕದ ಕನ್ನಡ ಅನುವಾದ "ಪುನರುದ್ದೀಪ್ತ" ಕೃತಿಯನ್ನು ಶ್ರೀಮತಿ ಗಾಯತ್ರಿ ಮೂರ್ತಿ ಅವರು ಕಲಾಂ ಮತ್ತು ಅವರ ಸಹ ಲೇಖಕ ಕನ್ನಡದಲ್ಲೇ ಬರೆದಿದ್ದಾರೋ ಎನ್ನುವಷ್ಟು ಸರಳ ಭಾಷೆಯಲ್ಲಿ ಅನುವಾದಿಸಿರುತ್ತಾರೆ.

HONGANASU KANNADA MONTHLY
RNI No. KAR/KAN/2015/64049
REGISTERED
Post office Registration No.RNP/KA/BGS/2229/2018-2020
dt. 27-10-2017
Office of Posting: Bangalore PSO, Bangalore 560026
Price :Annual Subscription Rs. 20/-
Date of publishing and Posting : 30-04-2019

ಡಾ. ಎ.ಪಿ.ಜೆಅಬ್ದುಲ್ ಕಲಾಂ ಅವರು ಪ್ರಖ್ಯಾತ ವಿಜ್ಞಾನಿಗಳ ಸಂಶೋಧನೆಯ ಜೊತೆಗೆ ಅವರು ತಮ್ಮ ಜೀವನದಲ್ಲಿ ಸಂಘರ್ಷಗಳನ್ನು/ಸವಾಲುಗಳನ್ನು ಎದುರಿಸಿದ ಬಗೆಯನ್ನು ವಿವರಿಸಿ ಅದರಿಂದ ಮಕ್ಕಳು ಸ್ಫೂರ್ತಿ ಪಡೆಯುವ ಆಶಯ ಹೊಂದಿರುತ್ತಾರೆ. ಮೈಕೇಲ್ ಫ್ಯಾರಡೆ, ಐನಸ್ಟೀನ್, ರಾಮನ್ ಅವರಂತಹ ವಿಜ್ಞಾನಿಗಳ ಜೀವನದ ಬಗ್ಗೆ ವಿವರಣೆ ನೀಡಿರುವುದಲ್ಲದೇ, ಹಲವಾರು ವೈಜ್ಞಾನಿಕ ವಿಷಯಗಳ ಬಗ್ಗೆ ವಿವರವಾದ ಮಾಹಿತಿ ನೀಡಿರುತ್ತಾರೆ. ಕೆಲವು ಅಧ್ಯಾಯಗಳಲ್ಲಿ ಪದೇ ಪದೇ ಕೇಳುವ ಪ್ರಶ್ನೆಗಳಿಗೆ ಉತ್ತರ ನೀಡುವ ಶೈಲಿ ಬಳಸಿದ್ದರೆ, ಕೆಲವು ಅಧ್ಯಯಾಗಳಲ್ಲಿ ವಿಜ್ಞಾನಿಗಳ/ಬೋಧಕರಜೊತೆ ಸಂಭಾಷಣೆ ಶೈಲಿಯಲ್ಲಿ ಉಪಯುಕ್ತ ಮಾಹಿತಿ ನೀಡಿರುತ್ತಾರೆ. ಎಳೆಯರಿಗೆ ಭೂಮಿಯ ದೀರ್ಘ ಇತಿಹಾಸದ ಬಗ್ಗೆ ತಿಳಿಸುತ್ತಾ ಮಾನವನಿಗೆ ತಿಳಿದಿರುವುದು ಶೇ ೩ರಷ್ಟು ಅಂದರೆ ಸುಮಾರು ೧೦೦ ಮಿಲಿಯ ವರ್ಷಗಳ ಇತಿಹಾಸ ಮಾತ್ರ ಎಂದು ತಿಳಿಸಿರುತ್ತಾರೆ.

ಈ ಪುಸ್ತಕದ ವೈಶಿಷ್ಟ್ಯತೆ ಎಂದರೆ ವಿಜ್ಞಾನಿಯಾಗುವ ಆಸಕ್ತಿ ಇರುವ ಯುವ ಜನರಿಗೆ, ಪ್ರತಿ ಕ್ಷೇತ್ರಕ್ಕೆ ಸಂಬಂಧಿಸಿದಂತೆ, ಪ್ರತಿಷ್ಠಿತ ಸಂಸ್ಥೆಗಳಲ್ಲಿ ವಿಜ್ಞಾನಿಯಾಗಿ ಉದ್ಯೋಗ ಪಡೆದು ಸಂಶೋಧನೆಗಳನ್ನು ನಡೆಸಲು ಲಭ್ಯವಿರುವ ಅವಕಾಶಗಳ ಬಗ್ಗೆಯ ಮಾಹಿತಿಯನ್ನೂ ನೀಡಿರುತ್ತಾರೆ.

ಶ್ರೀಮತಿ ಗಾಯತ್ರಿ ಮೂರ್ತಿ ಅವರು ಭೌತ ಶಾಸ್ತ್ರದ ನಿವೃತ್ತ ಅಧ್ಯಾಪಕಿಯಾಗಿದ್ದು, ವಿಜ್ಞಾನ ಬರಹಗಾರ್ತಿ, ವಿಜ್ಞಾನ ಸಂವಹನಕಾರ್ತಿಯಾಗಿ ವಿಜ್ಞಾನವನ್ನು ಬೋಧಿಸುವಲ್ಲಿ ಅಪಾರ ಅನುಭವ ಹೊಂದಿರುತ್ತಾರೆ. ಅಪಾರ ಮಾಹಿತಿಯನ್ನು ಒಳಗೊಂಡಿರುವ ಹಾಗೂ ಸುಲಲಿತ ಶೈಲಿಯಲ್ಲಿ ಅನುವಾದ ಗೊಂಡಿರುವ "ಪುನರುದ್ದೀಪ್ತ" ಈ ವರ್ಷದ ಪ್ರಮುಖಅನುವಾದಿತ ವಿಜ್ಞಾನದ ಪುಸ್ತಕವಾಗಬಹುದು ಎಂಬುದು ವೇದ್ಯವಾಗುತ್ತದೆ. ಯುವ ಜನರಿಗೆ ಉಪಯುಕ್ತ ಪುಸ್ತಕ

**– ಬಿ.ಆರ್. ರವೀಂದ್ರನಾಥ**

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ** ತೆರೆದ–ಅಂಚೆ

ಶ್ರೀಮತಿ/ಶ್ರೀ.........................................................................

.........................................................................

.........................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭